ಶ್ರೀ ಮದ್ಯೋಗಾನಂದ ಗುರುನೃಸಿಂಹ ಪ್ರಸನ್ನಃ



# ಕೂಟ ಮಹಾ ಜಗತ್ತು

## ಕೂಟ ಬ್ರಾಹ್ಮಣರ ಮೂಲ ಮತ್ತು ಶ್ರೀ ಸಾಲಿಗ್ರಾಮಕ್ಷೇತ್ರ ಮಾಹಾತ್ಮ್ಯೆ

ಪ್ರಕಾಶಕರು:

**ಕೂಟ ಮಹಾ ಜಗತ್ತು, ಸಾಲಿಗ್ರಾಮ, (ರಿ.)**

ಪೋಸ್ಟು ಸಾಲಿಗ್ರಾಮ, ದ. ಕ.

1958

# ವಿಷಯ ಸೂಚಿ

ಮುನ್ನುಡಿ

1. ಕೋಟ ಬ್ರಾಹ್ಮಣರ ಮೂಲ
2. ಪತಿತ ವರ್ಗದವರು
3. ಕೋಟ ಬ್ರಾಹ್ಮಣರೂ ಮತ್ತು ಇತರ ಬ್ರಾಹ್ಮಣರೂ
4. ಕೋಟ ಬ್ರಾಹ್ಮಣರನ್ನು ಎದುರಿಸುವ ಕೆಲವು ಸಮಸ್ಯೆಗಳು
5. ಶ್ರೀ ಸಾಲಿಗ್ರಾಮ ಕ್ಷೇತ್ರ ಮಾಹಾತ್ಮ್ಯಂ



3000 ಪ್ರತಿಗಳು

ಸರಸ್ವತೀ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್, ಮಂಗಳೂರು.



ಶ್ರೀಸಾಲಿಗ್ರಾಮ ಕ್ಷೇತ್ರದ
ಶ್ರೀಗುರುನರಸಿಂಹ ದೇವರು

# ಮುನ್ನುಡಿ



ಶ್ರೀ ವೇದವ್ಯಾಸ ಮುನಿಗಳಿಂದ ರಚಿತವಾದ ಸ್ಕಂದಪುರಾಣದ ಪ್ರಾಮುಖ್ಯ ವಿಭಾಗವೆಂದರೆ ಸಹ್ಯಾದ್ರಿಖಂಡವು. ಇದನ್ನು ಪೂರ್ವಾರ್ಧ ಮತ್ತು ಉತ್ತರಾರ್ಧ ಎಂದು ವಿಭಾಗಿಸಿದ್ದಾರೆ. ಪೂರ್ವಾರ್ಧದಲ್ಲಿ ಬ್ರಹ್ಮಾಂಡದ ಉತ್ಪತ್ತಿ, ಸೃಷ್ಟಿಕ್ರಮ ಆದಿವಿಷಯಗಳನ್ನು ವಿವರಿಸಿದೆ. ಉತ್ತರಾರ್ಧದಲ್ಲಿ ಬ್ರಾಹ್ಮಣೋತ್ಪತ್ತಿ, ಪಾತಿತ್ಯ ಆದಿವಿಚಾರಗಳು ನಿರೂಪಿತವಾಗಿವೆ.

ಸಹ್ಯಾದ್ರಿಖಂಡದ ಕೈಬರಹದ ಪ್ರತಿಗಳು ನಮ್ಮ ಭಾರತ ದೇಶದ ವಿವಿಧ ಭಾಗಗಳಲ್ಲಿವೆ. ಸುಮಾರು 1870–75ರ ಸಾಲಿನಲ್ಲಿ ಜೆ. ಜರ್ಸನ್ ಡ.ಕುನ್ಹ, ಎಂ. ಆರ್. ಸಿ. ಎಸ್., ಎಲ್. ಎಂ. ಮತ್ತು ಎಲ್. ಆರ್. ಸಿ. ಪಿ. (Edin) ಎಂಬ ಸಂಶೋಧಕರು ಈ ಕೆಳಗೆ ಕಾಣಿಸುವಂತೆ 14 ಪ್ರತಿಗಳನ್ನು ಆಧರಿಸಿ, ಸಹ್ಯಾದ್ರಿಖಂಡ (ಪೂರ್ವಾರ್ಧ ಮತ್ತು ಉತ್ತರಾರ್ಧ)ವನ್ನು ನಿರ್ಣಯಸಾಗರ ಪ್ರೆಸ್ಸಿನಲ್ಲಿ ಮೂಲವನ್ನು ಮಾತ್ರ ಸಂಸ್ಕೃತ ಲಿಪಿಯಲ್ಲಿ ಮುದ್ರಿಸಿ 1877ರಲ್ಲಿ ಪ್ರಕಟಿಸಿದರು. ಅವರು ಈ ಗ್ರಂಥದ ಆದಿಯ ನುಡಿಯಲ್ಲಿ ಹೀಗೆಂದಿರುವರು.

The Subjoined text of the Sahyadri-Khanda, a part of the Skanda Purana, has been drawn from fourteen MSS from various parts of India.

ಸ್ಕಂದಪುರಾಣದ ಭಾಗವಾಗಿರುವ ಈ ಸಹ್ಯಾದ್ರಿಖಂಡವು ಭಾರತದ ವಿವಿಧ ಭಾಗಗಳಿಂದ ಸಂಗ್ರಹಿಸಿದ ಹದಿನಾಲ್ಕು ಹಸ್ತಪ್ರತಿಗಳನ್ನು ಆಧರಿಸಿ ಪ್ರಕಟಿಸಲ್ಪಟ್ಟಿದೆ. ಅವರು ಆಧರಿಸಿರುವ ಪ್ರತಿಗಳ ವಿವರವು ಈ ಪ್ರಕಾರ ಇದೆ.

1. ಕೊಚ್ಚಿಪ್ರತಿ 2. ಜನಾಡಪತಿ 3. ಬೊಂಬಾಯಿ ರೊಯಲ್ ಏಸಿಯಾಟಿಕ್ ಸಂಘದ ಪ್ರತಿ 4. ಅದೇ ಸಂಘದವರು ಸಂಗ್ರಹಿಸಿದ ಗುಜರಾತಿ ಬರಹದ ಪ್ರತಿ 5. ಕೋಟ (ನಮ್ಮ ಮಹಾಜಗತ್ತಿನಿಂದ) 6.

ಸಿದ್ಧಾಪುರ (ಉತ್ತರ ಕನ್ನಡ ಜಿಲ್ಲೆ) 7. ಚೇಂಪಿ (?) 8. ಗೋವಾ
ಅಥವಾ ಗೋವಾ 9. ಕಾಶಿ ಮತ್ತು 10–14 ಬೊಂಬಾಯಿಯ ವಿ
ಭಾಗದಿಂದ ಸಂಗ್ರಹಿಸಲ್ಪಟ್ಟ ಐದು ಪ್ರತಿಗಳು.

ಡ. ಕುನ್ಹರು ಪ್ರಕಟಿಸಿರುವ ಗ್ರಂಥದಲ್ಲಿ 21 ಅಧ್ಯಾಯಗ
ಮಾತ್ರ ಇವೆ. ಗ್ರಾಮವಿಚಾರಗಳನ್ನು ನಿರೂಪಿಸಿರುವ ಅಧ್ಯಾಯಗ
ಸೇರಿರುವುದಿಲ್ಲ. ಗ್ರಾಮಪದ್ಧತಿ ಎಂಬ ಹೆಸರಿನಿಂದ ಈ ಅಧ್ಯಾಯಗ
ಸ್ವತಂತ್ರ ಗ್ರಂಥವಾಗಿರುವುದರಿಂದ ಅವರು ಸೇರಿಸದೆ ಇರಲು ಕಾ
ಇರಬಹುದು. ಆದರೆ ಹೊಸಬಾಳೆ ಗ್ರಾಮ ನಿವಾಸಿ ಅನಂತ ಶರ್ಮ
ಪ್ರಕಟಿಸಿದ ಉತ್ತರ ಸಹ್ಯಾದ್ರಿಖಂಡದಲ್ಲಿ ಗ್ರಾಮ ಭೇದ, ಗೃಹ ಭೇದ
ಅಧ್ಯಾಯಗಳು ಸೇರಿ 34 ಅಧ್ಯಾಯಗಳಿವೆ. ಇದು ಕನ್ನಡಾರ್ಥಸ
ಕನ್ನಡ ಲಿಪಿಯಲ್ಲಿದೆ. ಈ ಎರಡು ಗ್ರಂಥಗಳನ್ನು ತುಲನೆಮಾಡಿ "ಕ
ಮಹಾ ಜಗತ್ತು" ಎಂಬ ಶಾಸ್ತ್ರೀಯ ಮತ್ತು ಚಾರಿತ್ರಿಕ ವಿಭಾ
ರಚಿಸಲ್ಪಟ್ಟಿದೆ. ಆಯ್ದ ಶ್ಲೋಕಗಳು ಕನ್ನಡ ಗ್ರಂಥಾನುಸಾರ ಇ

ಸಹ್ಯಾದ್ರಿ ಪರ್ವತಾವಳಿಯಲ್ಲಿ ಸ್ಥಾಪಿತವಾದ ದೇವಾಲಯ
ಮಾಹಾತ್ಮ್ಯಗಳು ಪ್ರಸಿದ್ಧವಾಗಿವೆ. ಡ. ಕುನ್ಹರು ತಮ್ಮ ಸಹ್ಯಾದ್ರಿಖಂ
ಅಂತ್ಯದಲ್ಲಿ ರೇಣುಕಾ ಮಾಹಾತ್ಮ್ಯ, ಚಂದ್ರಚೂಡ (ಚಂದ್ರೇಶ
ಮಾಹಾತ್ಮ್ಯ ಮತ್ತು ಮಾಂಗೀಶ ಮಾಹಾತ್ಮ್ಯ ಇವು ಮೂರನ್ನು ಸೇ
ದ್ದಾರೆ. ಉಳಿದ ಮಾಹಾತ್ಮ್ಯಗಳನ್ನು ಸೇರಿಸದಿರುವ ಕಾರಣವ
ಸೂಚಿಸಿರುವುದಿಲ್ಲ.

ಶ್ರೀ ಸಾಲಿಗ್ರಾಮ ಕ್ಷೇತ್ರ ಮಾಹಾತ್ಮ್ಯಯು ಪ್ರಸಿದ್ಧವ
ಮಾಹಾತ್ಮ್ಯಯಾಗಿದೆ. ಇದರ ತಾಡಪತ್ರಪ್ರತಿಗಳೂ, ಸಹ್ಯಾದ್ರಿಖ
ಮತ್ತು ಲೋಕಾದಿತ್ಯಪದ್ಧತಿ ಇವುಗಳ ತಾಡಪತ್ರಪ್ರತಿಗಳೂ ನ
ಕೂಟ ಪ್ರದೇಶದಲ್ಲಿಯೇ ಕೆಲವರ ವಶ ಇವೆ. ಆದರೆ ಇವು ಯ
ಕಣ್ಣಿಗೂ ಬೀಳದಂತೆ ಗುಪ್ತಧನವಾಗಿ ಕಾಯುತ್ತಿರುವರು.

ಜಗತ್ತಿನ ಜನರಲ್ಲಿ ಶ್ರೀ ಗುರುನೃಸಿಂಹ ದೇವಸ್ಥಾನದಲ್ಲಿ ಶ್ರದ್ಧಾ
ಯನ್ನು ಪ್ರವರ್ಧಿಸುವುದಕ್ಕಾಗಿ ಶ್ರೀ ಸಾಲಿಗ್ರಾಮ ಕ್ಷೇತ್ರ ಮಾಹಾ

ಯನ್ನು ಪ್ರಕಟಿಸಬೇಕೆಂದರೆ ತಾ. 14-1-1958ರಲ್ಲಿ ಜರಗಿದ ಕೂಟ ಮಹಾ ಜಗತ್ತು ನಿರ್ಣಯಿಸಿದ ಪ್ರಕಾರ ಅಧ್ಯಕ್ಷರು ಕೊಟ್ಟ ಕೂಟ ಬ್ರಾಹ್ಮಣರ ಮೂಲ, ಪತಿತವರ್ಗದವರು, ಕೂಟ ಬ್ರಾಹ್ಮಣರೂ ಮತ್ತು ಇತರ ಬ್ರಾಹಣರೂ, ಕೂಟ ಬ್ರಾಹ್ಮಣರನ್ನು ಎದುರಿಸುವ ಸಮಸ್ಯೆಗಳು ಎಂಬಾದಿ ಸೂಚನೆಗಳ ಪ್ರಕಾರ ವಿಷಯ ಸಂಗ್ರಹಕ್ಕಾಗಿ ಅನೇಕ ಕಡೆ ಸಂಚರಿಸಿ, ಬ್ರಹ್ಮಶ್ರೀ ದೀಕ್ಷಿತ ವೆಂಕಟಕೃಷ್ಣ ಸೋಮಯಾಜಿಗಳು, ಬ್ರಹ್ಮ ಶ್ರೀ ತಟ್ಟವಟ್ಟ ವಾಸುದೇವ ಭಟ್ಟರು, ಅದ್ವೈತ ವೇದಾಂತ ಶಿರೋಮಣಿ ಮತ್ತು ಕನ್ನಡ ವಿದ್ವಾನ್ ಶ್ರೀ ಕಡವು ಶಂಭು ಶರ್ಮ ಮೊದಲಾದವರನ್ನು ವಿಚಾರಿಸಿದೆನು. ಡ. ಕುನ್ದರ ಪ್ರತಿಯನ್ನು ಶ್ರೀ ಸಾಲಿಗ್ರಾಮ ಕ್ಷೇತ್ರ ಮಾಹಾತ್ಮ್ಯ ಮತ್ತು ಕನ್ನಡ ಪ್ರತಿ ತೆಗೆಯಿಸಿಕೊಟ್ಟು ಬಾಳೆಕುದ್ರು ಶ್ರೀ ಆನಂದಾಶ್ರಮ ಸ್ವಾಮಿಯರು ಅನುಗ್ರಹಿಸಿದರು. ಶ್ರೀ ದೀಕ್ಷಿತ ವೆಂಕಟಕೃಷ್ಣ ಸೋಮಯಾಜಿಗಳು ಲೋಕಾದಿತ್ಯ ಪದ್ಧತಿಯ ಪ್ರಾಮುಖ್ಯ ಭಾಗಗಳನ್ನು ಓದಿ ವಿವರಿಸಿದರು. ಶ್ರೀ ಕಡವು ಶಂಭು ಶರ್ಮರು (ಪುತ್ತೂರು) ಇವೆಲ್ಲವನ್ನೂ ದೀರ್ಘಕಾಲ ಪರಿಶ್ರಮಪಟ್ಟು ಪರಿಶೋಧಿಸಿ ಪ್ರಕಾಶಕ್ಕೆ ಯೋಗ್ಯವಾದ ರೂಪವನ್ನು ಕೊಟ್ಟರು. ಮಾತ್ರವಲ್ಲದೆ ಸಂಶಯವನ್ನು ಬಗೆಹರಿಸಿ ಸರಳಾನುವಾದ ಬರೆಯಲು ತುಂಬಾ ನೆರವಾದರು. ಆದ್ದರಿಂದ ಶ್ರೀ ಕಡವು ಶಂಭು ಶರ್ಮರಿಗೆ ನನ್ನ ಹೃತ್ಪೂರ್ವಕ ಅಭಿವಂದನೆ ಮತ್ತು ಕೃತಜ್ಞತೆಯನ್ನು ಈ ಮೂಲಕ ಸ್ಮರಿಸುತ್ತೇನೆ. ಶ್ರೀ ವಾಸುದೇವ ಭಟ್ಟರಿಗೂ, ಶ್ರೀ ವೆಂಕಟಕೃಷ್ಣ ಸೋಮಯಾಜಿಗಳಿಗೂ ಮತ್ತು ಇತರರಿಗೂ ನನ್ನ ಪ್ರಶ್ನೆಗಳನ್ನು ಉತ್ತರಿಸಿ ಸಹ್ಯಾದ್ರಿ, ಗ್ರಾಮ ಪದ್ಧತಿ ಮತ್ತು ಲೋಕಾದಿತ್ಯ ಪದ್ಧತಿಯನ್ನು ಪರಿಚಯ ಮಾಡಿಕೊಟ್ಟದ್ದಕ್ಕಾಗಿ ನಾನು ನನ್ನ ಕೃತಜ್ಞತೆ ಮತ್ತು ಅಭಿವಂದನೆಯನ್ನು ಈ ಮೂಲಕ ಸಲ್ಲಿಸುತ್ತೇನೆ. ಈ ವಿಚಾರದಲ್ಲಿ ಶ್ರೀ ಆನಂದಾಶ್ರಮ ಸ್ವಾಮಿಯವರು ಮಾಡಿದ ಉಪಕಾರವನ್ನು ನಾವೆಂದೂ ಮರೆಯಲಾರೆವು.

ನಮಗೆ ಬಾಳೇಕುದ್ರುಮಠದಿಂದ ದೊರೆತ ಶ್ರೀ ಸಾಲಿಗ್ರಾಮ ಕ್ಷೇತ್ರದಲ್ಲಿ 'ಇತಿಸಾದ್ಮೆಪುಷ್ಕರಖಂಡೇ ಶಾಲಗ್ರಾಮ ಮಾಹಾತ್ಮ್ಯೆ' ಎಂದಿದೆ. ಇದರಲ್ಲಿ ಮೂರು ಅಧ್ಯಾಯಗಳಿವೆ. ಪ್ರಥಮೋಧ್ಯಾಯದಲ್ಲಿ ೩೧ ಶ್ಲೋಕ

ಗಳಿವೆ. ದ್ವಿತೀಯೋಧ್ಯಾಯದಲ್ಲಿ ೬೨ ಶ್ಲೋಕಗಳಿವೆ. ಮತ್ತು ಅಪೂ
ವಾದ ತೃತೀಯೋಧ್ಯಾಯದಲ್ಲಿ ೧೩೭ ಮತ್ತು ಗ್ರಂಥಪಾಠಾನಂತರ
ಶ್ಲೋಕಗಳಿವೆ. ಆದರೆ ಈ ಗ್ರಂಥದಲ್ಲಿ ಮಯೂರವರ್ಮ, ಲೋಕಾ
ಇವರ ವಿಚಾರವೇ ಬಹುವಾಗಿ ಹೇಳಿದೆ. ಆದ್ದರಿಂದ ಶ್ರೀ ಗುರುನೃಸಿ
ಮಾಹಾತ್ಮ್ಯೆಯನ್ನು ಪ್ರತಿಪಾದಿಸುವ ಶ್ಲೋಕಗಳನ್ನು ಮಾತ್ರ ಆ
ಸಂಗ್ರಹಿಸಿರುವೆವು.

ನಮ್ಮ ಮೂಲವೆಲ್ಲಿ? ಎಂಬ ಪ್ರಶ್ನೆ ಎಲ್ಲರ ಮುಂದೆ ಬಂದು ನಿಲ್ಲುವ
ಸಹಜವು. ನಮ್ಮ ಮೂಲವೇ ಬ್ರಾಹ್ಮಣರ ಆದಿ ಮಂಡಲವಾ
ಅಹಿಚ್ಛತ್ರವು ಎಂದು ಸಹ್ಯಾದ್ರಿ ಖಂಡವು ಉದ್ಘೋಷಿಸುತ್ತದೆ. ಗೋದಾ
ನದಿಯ ದಕ್ಷಿಣ ಭಾಗದಲ್ಲಿರುವ ಈ ಅಹಿಚ್ಛತ್ರ ವಿಚಾರ ಡಾಕ್
ಫ್ರೇನ್ಸಿಸ್ ಬೂಚನನರು 1800 ಎಪ್ರಿಲ್ ತಿಂಗಳಿಂದ 1801 ಜೂನು 2
ವರೆಗೆ ಮದ್ರಾಸು, ಮೈಸೂರು, ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗ
ಇವನ್ನು ಸಂಚರಿಸಿ ತನ್ನ ಪ್ರವಾಸದ ವರದಿಯಲ್ಲಿ ಬರೆದಿರುವರು.
ಪ್ರಕಟವಾಗಿದ್ದರೂ, ಈಗ ಇದರ ಪ್ರತಿಗಳು ದೊರೆಯುವುದಿಲ್ಲ. ನ
ಜಿಲ್ಲೆಯ ಪ್ರವಾಸದ ವರದಿಯು ನಮಗೆ ಸಿಗಲಿಲ್ಲ. ಉತ್ತರ ಕನ
ಜಿಲೆಯ ಪ್ರವಾಸದ ವರದಿಯ ಭಾಗವು ಇತ್ತಲಾಗಿ ಕಾರವಾರ
ಪ್ರಕಟವಾಗಿದೆ. ಬೂಚನನರು 1801ನೆ ಫೆಬ್ರವರಿ ತಿಂಗಳ 25
ಹಿರಿಗುಟ್ಟೆಯಲ್ಲಿ ಹೈಗ ಬ್ರಾಹ್ಮಣರ ಸಭೆಯನ್ನು ಕರೆದು ಅವರ ಮ
ವೇನೆಂದು ಪ್ರಶ್ನಿಸಿದರು. ಅವರೆಲ್ಲರೂ ಸಹ್ಯಾದ್ರಿ ಖಂಡವನ್ನೇ ಆಧ
ದರು. ಮಯೂರವರ್ಮರಾಜನು ಐದು ಸಾವಿರ ಶುದ್ಧ ಬ್ರಾಹ್ಮಣರ
ತೆಲಂಗಾನದ ಅಹಿಚ್ಛತ್ರದಿಂದ ಕರತಂದು ಹೈಗ ದೇಶದಲ್ಲಿ ಸ್ಥಾ
ದ್ದಾಗಿಯೂ, ಅದೇ ಪ್ರಕಾರವೇ ಅದೇ ಮೂಲದಿಂದ ಬ್ರಾಹ್ಮಣರ
ಕರತಂದು ಕೊಂಕಣ ಮತ್ತು ತುಳುವ (ನಮ್ಮ ಜಿಲ್ಲೆ) ಪ್ರದೇಶಗ
ಸ್ಥಾಪಿಸಿದ್ದಾಗಿಯೂ ತಮ್ಮ ಐತಿಹ್ಯವನ್ನು ನಿವೇದಿಸಿದ್ದರು. ಈ ವಿಚ
ವನ್ನು ಈ ಪ್ರಕಾರ ವರದಿ ಮಾಡಿದ್ದಾರೆ.

History of Haiga according to the Brahmi
25—2—1801 at Hiriguthy.

He (Mayuravarma) then brought a colony of five thousand true Brahmins from Ahichaytra, a City in Telingana and settled them in Haiga. He brought others of the same origin (and settled them) in Konkana and Tuluva—P. 38.

ದ್ರೋಣಾಚಾರ್ಯನು ಸಹಪಾಠಿಯಾದ ತನ್ನನ್ನು ದ್ರುಪದನು ತಿರಸ್ಕರಿಸಿದ ಅಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಶಿಷ್ಯಾಗ್ರಣಿ ಅರ್ಜುನನಿಂದ ಮಾಡಿಸಿದನು. ಅರ್ಜುನನು ದ್ರುಪದನನ್ನು ಸೋಲಿಸಿ ಅವನನ್ನು ಸೆರೆ ಹಿಡಿದು ಗುರು ದ್ರೋಣಾಚಾರ್ಯನ ಪಾದದಲ್ಲಿ ಕೆಡವಿದನು. ದ್ರೋಣಾಚಾರ್ಯನು ದ್ರುಪದನಿಗೆ ಗಂಗೆಯ ದಕ್ಷಿಣ ಪ್ರದೇಶವನ್ನು ಬಿಟ್ಟುಕೊಟ್ಟು ತಾನು ಉತ್ತರ ಭೂಭಾಗದಲ್ಲಿ ರಾಜ್ಯಭಾರ ಮಾಡಿದ ಕಥೆಯು ಆದಿ ಪರ್ವದ ೧೩೭ನೇ ಅಧ್ಯಾಯದಲ್ಲಿ ನಿರೂಪಿತವಾಗಿದೆ.

ಅಹಿಚ್ಛತ್ರಂ ಚ ವಿಷಯಂ ದ್ರೋಣಃ ಸಮಭಿಪದ್ಯತ (೧೩೭-೭೬) ಉತ್ತರ ಪಾಂಚಾಲವರ್ತಿ ಎಂಬ ಅಹಿಚ್ಛತ್ರ ಹೆಸರಿನ ರಾಜ್ಯವನ್ನು ದ್ರೋಣಾಚಾರ್ಯನು ತನ್ನ ಅಧಿಕಾರದಲ್ಲಿಟ್ಟುಕೊಂಡನು ಎಂದು ವೇದ ವ್ಯಾಸರು ವರ್ಣಿಸಿರುವರು. ಆದ್ದರಿಂದ ಈ ಅಹಿಚ್ಛತ್ರ ನಮ್ಮ ಮೂಲ ಸ್ಥಾನವಿರಬಹುದೆ? ಎಂಬ ಶಂಕೆ ಬರುವುದು ಸಹಜವು. ನಾವು ಕದಂಬ ರಾಜನಾದ ಮಯೂರವರ್ಮನ ಕಾಲದ ಅಹಿಚ್ಛತ್ರವನ್ನು ವಿಚಾರಿಸುವುದಾದರೆ ಅದು ಗೋದಾವರಿ ತೀರದ ದಕ್ಷಿಣ ಪ್ರದೇಶವಾದ ಅಹಿಚ್ಛತ್ರ ಎಂಬುದರಲ್ಲಿ ಯಾವ ಸಂಶಯಕ್ಕೂ ಎಡೆಯಿಲ್ಲ.

ಕಶ್ಯಪರು ಮಯೂರವರ್ಮನಿಗೆ "ಮೇರು ಪರ್ವತಕ್ಕೆ ದಕ್ಷಿಣ ಭಾಗದಲ್ಲಿ ಅಹಿಚ್ಛತ್ರವೆಂಬ ಪ್ರಸಿದ್ಧ ದೇಶವಿದೆ. ಅದು ಬ್ರಾಹ್ಮಣರ ಆದಿ ಮಂಡಲ. ಸರ್ವಶಾಸ್ತ್ರವಿಶಾರದರೂ ಆದ ಬ್ರಾಹ್ಮಣರು ಬಹು ಸಂಖ್ಯಾಕರು ಈ ಅಹಿಚ್ಛತ್ರದಲ್ಲಿದ್ದಾರೆ. ಅವರನ್ನು ಕರೆತಂದು ನಿನ್ನ ರಾಜ್ಯದಲ್ಲಿ ಸ್ಥಾಪಿಸು" ಎಂದು ಹೇಳಿದ್ದರು. ಮೇರು ಪರ್ವತಕ್ಕೆ ದಕ್ಷಿಣಕ್ಕಿರುವ ಅಹಿಚ್ಛತ್ರವೇ ಗೋದಾವರಿಯ ದಕ್ಷಿಣ ತೀರದಲ್ಲಿರುವ ಅಹಿಚ್ಛತ್ರ. ಇದನ್ನು ಡಾ. ಬೂಚನನ ತೆಲಂಗಾನ ಅಹಿಚ್ಛತ್ರ ಎಂಬ ಶೋಧನೆಯು ಸಮರ್ಥಿಸುತ್ತದೆ.

ನಮ್ಮ ಅತೀ ಪ್ರಾಚೀನ ಪೂರ್ವಿಕರು ಆರ್ಯಾವರ್ತ ಅಹಿ ಎಂಬ ಉತ್ತರ ಪಂಚಾಲದಲ್ಲಿ ವಾಸಿಸಿದ್ದಿರಬಹುದು. ಆದರೆ ಅ ದಕ್ಷಿಣಕ್ಕೆ ವಲಸೆಬಂದು ತಮ್ಮದೇ ಆದ ಅಹಿಚ್ಛತ್ರವನ್ನು ಗೋದಾ ತೀರದ ದಕ್ಷಿಣ ಕೂಲದಲ್ಲಿ ಸ್ಥಾಪಿಸಿರಬೇಕು. ಅನೇಕ ಶತಮಾನ ಕಳೆದ ನಂತರ ನಮ್ಮ ಪೂರ್ವಿಕರು "ಆರ್ಯ" ಎಂಬ ಹೆಸರನ್ನು ಸಂಪೂ ಮರೆತು, "ದ್ರಾವಿಡ ಬ್ರಾಹ್ಮಣರು" ಎಂದು ಕರೆದುಕೊಂಡಿರಬೆ ಶ್ರೀ ಶಂಕರಾಚಾರ್ಯರೂ ಕೂಡಾ ತಮ್ಮನ್ನು "ಸೌಂದರ್ಯ ಲಹರಿಯ "ದಯಾವತ್ಯಾ ದತ್ತಂ ದ್ರವಿಡಶಿಶು ರಾಸ್ವಾದ್ಯತವ" (೭೫)—ದಯಾ ಯಾದ ಹಿಮವಂತನ ಪುತ್ರಿಯೇ! ನೀನಿತ್ತ ಮೊಲೆಯುಂಡ ದ್ರವಿಡ ವಾದ ನಾನು ಎಂದು ಸ್ಮರಿಸಿದ್ದಾರೆ. ನಾವು ಪಂಚ ದ್ರಾವಿಡ ಬ್ರಾ ರಲ್ಲಿ ಒಂದು ವರ್ಗವಾಗಿ ಇರುವೆವು.

ಮಹಾದೇವನು ಪುತ್ರನಾದ ಸ್ಕಂದನಿಗೆ ಬ್ರಾಹ್ಮಣೋತ್ಪತ್ತಿಯ ವಿವರಿಸುವಾಗ ಪಂಚ ದ್ರಾವಿಡರನ್ನು ಈ ಪ್ರಕಾರ ನಿರೂಪಿಸಿರುವ

ದ್ರಾವಿಡಾಶ್ಚೈವ ತೈಲಂಗಾಃ ಕರ್ನಾಟಾಃ ಮಧ್ಯದೇಶಗಾಃ
ಗುರ್ಜರಾಶ್ಚೈವ ಪಂಚೈತೆ ದ್ರಾವಿಡಾಃ ಪಂಚಕಥ್ಯತೆ ॥ (ಸಹ

ದ್ರಾವಿಡ ಬ್ರಾಹ್ಮಣರು, ತೆಲಂಗ ಬ್ರಾಹ್ಮಣರು, ಕರ್ನಾ ಬ್ರಾಹ್ಮಣರು, ಮಧ್ಯದೇಶಕ ಬ್ರಾಹ್ಮಣರು, ಮತ್ತು ಗುರ್ಜರ ಬ್ರಾಹ್ಮ ಈ ಪ್ರಕಾರ ದ್ರಾವಿಡ ಬ್ರಾಹ್ಮಣರು ಪಂಚವಿಧ ಎಂದು ಹೇಳಿಯ

ಈ ಗ್ರಂಥವನ್ನು ರಚಿಸುವಂತೆ ಅಪ್ಪಣೆಯನ್ನಿತ್ತು, ಊರೆಲ್ಲಾ ಪಾಡಿ ವಿಷಯಗಳನ್ನು ಸಂಗ್ರಹಿಸಿ ಯಥಾಮತಿಯಾಗಿ ರಚಿಸಿರುವುದ ಪರಿಗ್ರಹಿಸಿ ಪ್ರಕಾಶಿಸಿದುದಕ್ಕಾಗಿ ನಾನು ಕೂಟ ಮಹಾ ಜಗತ್ತಿಗೆ ತುಂ ಅಭಾರಿಯಾಗಿದ್ದೇನೆ. ಮತ್ತು ನನ್ನ ಕೃತಜ್ಞತೆಯನ್ನು ಈ ಮೂ ಅರ್ಪಿಸುತ್ತೇನೆ.

ಇದರಲ್ಲಿರಬಹುದಾದ ಲೋಪದೋಷಗಳಿಗೆ ನಾನೇ ಜವಾಬ್ದಾರ ಈ ವಿಚಾರದಲ್ಲಿ ಸೇರಿಸಬಹುದಾದ ಹೊಸ ವಿಷಯಗಳಿದ್ದರೆ ಅವ ಸೂಚಿಸಿದಲ್ಲಿ ಮುಂದಿನ ಪ್ರಕಟಣೆಯಲ್ಲಿ ಉಪಯೋಗಿಸಲಾಗುವುದು

ಮಂಗಳೂರು
22—11—1958.

ಕೋ. ಶ. ಕಾರ
ಲೇಖಕ.

# 1

## ಕೂಟ ಬ್ರಾಹ್ಮಣರ ಮೂಲ

**ಪರಶುರಾಮ ದಿಗ್ವಿಜಯಃ** ಜಮದಗ್ನಿ ಋಷೀಶ್ವರರಿಗೆ ರೇಣುಕೆಯೆಂಬ ಅನುವ್ರತಳಾದ ಪತ್ನಿ ಇದ್ದಳು. ಅವರಿಗೆ ಐವರು ಗಂಡು ಮಕ್ಕಳಿದ್ದರು. ಅವರಲ್ಲಿ ಕಡೆಯವನೇ ವಿಷ್ಣುವಿನ ಆರನೆಯ ಅವತಾರಿಕನಾದ ಪರಶುರಾಮನು. ಒಂದು ದಿನ ಕಾರ್ತವೀರ್ಯನೆಂಬ ಕ್ಷಾತ್ರವಿರ್‍ಯಶ್ರೇಷ್ಠನಾದ ಅರಸನು ಜಮದಗ್ನಿಯ ಆಶ್ರಮಕ್ಕೆ ಸೈನ್ಯಸಮೇತನಾಗಿ ಬಂದನು. ಕೇಳಿದ್ದನ್ನು ಕೊಡಬಲ್ಲ ಕಾಮಧೇನುವಿನ ಕೃಪೆಯಿಂದ ಜಮದಗ್ನಿ ಋಷಿಯು ಆ ರಾಜನನ್ನು ಮತ್ತು ಅವನ ಅಪಾರ ಸೈನ್ಯವನ್ನು ವೈಭವದ ಭೋಜನದಿಂದ ಸತ್ಕರಿಸಿದನು. ಆ ಕಾಮಧೇನುವಿನ ಈ ಅಪಾರ ಮಹಿಮೆಯನ್ನು ತಿಳಿದ ಕಾರ್ತವೀರ್ಯನಿಗೆ ಅದು ತನ್ನಂತಹ ರಾಜರಲ್ಲಿರಬೇಕೆಂಬ ದುಷ್ಟಭಾವನೆ ಬಂತು. ಅರಸು ಆ ಕಾಮಧೇನುವಿಗಾಗಿ ಹೇರಾಳ ದ್ರವ್ಯವನ್ನು ಕೊಡುತ್ತೇನೆಂದರೂ ಮುನಿಯು ಅದನ್ನು ಅವನಿಗೆ ಕೊಡಲು ಒಪ್ಪಲಿಲ್ಲ. ಆಗ ರಾಜನು ಕಾಮಧೇನುವನ್ನು ಬಲಾತ್ಕಾರದಿಂದ ಕೊಂಡುಹೋಗುವಂತೆ ತನ್ನ ಸೈನ್ಯಕ್ಕೆ ಆಜ್ಞಾಪಿಸಿದನು. ಸೈನಿಕರು ಕಾಮಧೇನುವನ್ನು ಕೊಂಡುಹೋದರೂ, ಅದನ್ನು ರಾಜನು ಹಿಂದಕ್ಕೆ ತಂದು ಕೊಡುವನೆಂದು ಜಮದಗ್ನಿಯು ಮೌನನಾಗಿದ್ದನು.

ಇತ್ತ ಕಾಮಧೇನುವನ್ನು ಕೊಂಡುಹೋದ ಮೇಲೆ ಅದರ ಕರುವು ತಾಯಿಗಾಗಿ ಒಂದೇ ಸಮನೆ ಕೂಗಲಾರಂಭಿಸಿತು. ಸಮಿತ್ತು ಮತ್ತು ಪುಷ್ಪಗಳನ್ನು ತರುವುದಕ್ಕಾಗಿ ಹೋಗಿದ್ದ ಪರಶುರಾಮನು ಆಶ್ರಮಕ್ಕೆ ಬಂದು ಕರುವು ಏತಕ್ಕಾಗಿ ಕೂಗುತ್ತದೆಂದು ತನ್ನ ಅಣ್ಣಂದಿರನ್ನು ವಿಚಾರಿಸಿದನು. ಅವರು ಪರಶುರಾಮನಿಗೆ ನಡೆದ ವಿಚಾರವನ್ನೆಲ್ಲಾ ತಿಳಿಸಿದರು. ಪರಶುರಾಮನು ಕೂಡಲೇ ಸಿಟ್ಟಿನಿಂದ ಕಿಡಿಕಿಡಿಯಾಗಿ, "ಆ ದುಷ್ಟ ಕಾರ್ತವೀರ್ಯನ ರುಂಡವನ್ನು ನೆಲಕ್ಕುರುಳಿಸದೆ ಬಿಡೆನು" ಎಂದು ಅವನ ರಾಜಧಾನಿಯಾದ ಮಾಹಿಷ್ಮತಿ ನಗರಕ್ಕೆ ಪ್ರಳಯಕಾಲದ ರುದ್ರನಂತೆ

ಆರ್ಭಟಿಸುತ್ತ ನಡೆದನು. ಮಾರ್ಗ ಮಧ್ಯದಲ್ಲಿ ಕಾರ್ತವೀರ್ಯಾರ್ಜನ ಸೈ
ವನ್ನು ತಡೆದು, ತನ್ನ ಪರಶುವಿನಿಂದ ಆ ಎಲ್ಲಾ ಸೈನಿಕರ ಶಿರಸ್ಸು ಮ
ಭುಜಗಳನ್ನು ಕತ್ತರಿಸಿ ನೆಲಕ್ಕೆ ಕೆಡವಿದನು.

ತನ್ನ ಸೈನ್ಯವು ಈ ಪ್ರಕಾರ ನಾಶಹೊಂದಿರುವುದನ್ನು ನೋಡಿ ಕಾ
ವೀರ್ಯಾರ್ಜನು ಪರಶುರಾಮನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದ
ಅವೆಲ್ಲವನ್ನೂ ಪರಶುರಾಮನು ತುಂಡಾಡಿ, ಕಾರ್ತವೀರ್ಯಾರ್ಜನ ಸಹ
ಬಾಹುಗಳನ್ನೂ, ಶಿರಸ್ಸನ್ನೂ ಕತ್ತರಿಸಿಬಿಟ್ಟನು. ಕಾಮಧೇನುವ
ಬಿಡಿಸಿಕೊಂಡು ಆಶ್ರಮವನ್ನು ತ್ವರಿತದಲ್ಲಿ ಸೇರಿ ನಡೆದ ವಿಚಾರವನ್ನೆ
ಪರಶುರಾಮನು ತಂದೆಯೊಡನೆ ವಿಜ್ಞಾಪಿಸಿದನು. ಅಭಿಷಿಕ್ತನಾದ ರಾ
ನನ್ನು ಸಂಹರಿಸಿದ ಕೃತ್ಯವು ಜಮದಗ್ನಿಗೆ ಸರಿತೋರದೆ, "ಆಶ್ರಮದಿ
ಹೊರಟುಹೋಗು" ಎಂದು ಮಗನಿಗೆ ಆಜ್ಞಾಪಿಸಿದನು. ಪರಶುರಾಮ
ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಹೊರಟುಹೋದನು.

ಇತ್ತ ಪರಶುರಾಮನು ಆಶ್ರಮವನ್ನು ತ್ಯಜಿಸಿ ಹೊರಟುಹೋಗಿರ
ನೆಂದು ಕೇಳಿ ಕಾರ್ತವೀರ್ಯಾರಾಜನ ಮಕ್ಕಳು ಧೈರ್ಯಗೊಂಡು, ತ
ತಂದೆಯ ಮರಣದ ಮುಯ್ಯನ್ನು ತೀರಿಸಿಕೊಳ್ಳಲು ಆಶ್ರಮವನ್ನು ನು
ಜಮದಗ್ನಿಋಷಿಯ ಶಿರಸ್ಸನ್ನು ಛೇದಿಸಿ, ಬಹಳ ಅನರ್ಥವನ್ನು ಮಾ
ಹೋದರು. "ರಾಮಾ! ರಾಮಾ! ಇಂತಹ ವಿಪತ್ತಿನ ಕಾಲದಲ್ಲಿ ತಂದೆ
ಮಾತಿಗೆ ಕಟ್ಟುಬಿದ್ದು ನೀನಿಲ್ಲದಾಯಿತೆ? ಅಂತ್ಯಕಾಲದಲ್ಲಿ ಒಮ್ಮೆಯಾದ
ಬರಬಾರದೆ?" ಎಂದು ರೇಣುಕೆ ತುಂಬಾ ಪ್ರಲಾಪಗೈದಳು.

ಆಶ್ರಮದಿಂದ ಹೊರಟ ಮೇಲೆ ಪರಶುರಾಮನಿಗೆ ಮಾರ್ಗದ
ಅನೇಕ ದುರ್ನಿಮಿತ್ತಗಳು ಕಾಣಿಸಿದವು. ಅವನು ಏನೋ ವಿಪ
ಬಂದೊದಗಿದೆಯೆಂದು ಭಾವಿಸಿ ಆಶ್ರಮಕ್ಕೆ ಧಾವಿಸಿ ಬಂದನು. ಅಲ್ಲಿ ನಡೆ
ಅತ್ಯಾಚಾರವನ್ನೆಲ್ಲಾ ನೋಡಿ ಅತ್ಯಂತ ಶೋಕಪರವಶನಾಗಿ ಕರದ
ಪರಶುವನ್ನು ಧರಿಸಿ, ಕೂಡಲೇ ಮಾಹಿಷ್ಮತಿ ನಗರವನ್ನು ಸೇರಿ ಕಾರ್ತ
ವೀರ್ಯಾರ್ಜನ ಮಕ್ಕಳನ್ನೆಲ್ಲಾ ಶಿರಸ್ಸಿಲ್ಲದ ಗೊಂಬೆಗಳನ್ನಾಗಿ ಮಾಡಿದನು.
ಮೇಲೆ ಪೃಥ್ವಿಯನ್ನು ಇಪ್ಪತ್ತೊಂದು ಸಾರಿ ದಿಗ್ವಿಜಯಮಾಡಿ ದು

ಕ್ಷತ್ರಿಯರ ಕುಲಗಳನ್ನೂ ಅವರ ಸೈನ್ಯಗಳನ್ನೂ ಸಂಹರಿಸಿ, ಅವರ ರಕ್ತವನ್ನು ಕುರುಕ್ಷೇತ್ರದಲ್ಲಿರುವ ಪಂಚಸರೋವರಗಳಲ್ಲಿ ಕೂಡಿಸಿದನು. ಇವುಗಳು ಸ್ಯಮಂತಕ ಪಂಚಕ ಎಂದು ಕರೆಯಲ್ಪಟ್ಟಿವೆ. ಪರಶುರಾಮನು ಅಂದಿನಿಂದ ಕ್ಷತ್ರಿಯ ಕುಲಾಂತಕನೆಂದು ಹೆಸರಾಂತನು.

ಆ ಮೇಲೆ ಪರಶುರಾಮನು ದತ್ತಾತ್ರೇಯನನ್ನು ಸಂದರ್ಶಿಸಿ ತನ್ನ ಪಿತೃ ಸಂಸ್ಕಾರಕ್ಕೆ ಆಚಾರ್ಯನಾಗಬೇಕೆಂದು ಪ್ರಾರ್ಥಿಸಿದನು. "ತಥಾಸ್ತು" ಎಂದು ದತ್ತಾತ್ರೇಯನು ಎಳ್ಳು ದರ್ಭೆಯನ್ನು ತರಿಸಿ, ಸ್ಮಶಾನದಲ್ಲಿ ಜಮದಗ್ನಿಯ ಅಂತ್ಯೇಷ್ಟ್ಯಾದಿ ಸಂಸ್ಕಾರಗಳನ್ನು ವಿಧಿವತ್ತಾಗಿ ಪರಶುರಾಮನಿಂದ ಮಾಡಿಸಿದನು. ಈ ಕರ್ಮ ವಿಪಾಕವು ನಡೆದ ಮೇಲೆ ದತ್ತಾತ್ರೇಯನು ಪರಶುರಾಮನನ್ನು ಕುರಿತು, "ಪರಶುರಾಮಾ! ನೀನು ಮಹರ್ಷಿಗಳಿಂದ ಯಜ್ಞವನ್ನು ನೆರವೇರಿಸಿದರೆ ಕ್ಷತ್ರಿಯ ಕುಲ ಸಂಹಾರದಿಂದ ಪ್ರಾಪ್ತವಾದ ಎಲ್ಲಾ ಪಾಪಗಳು ಪರಿಹಾರವಾಗುವುವು" ಎಂದು ನುಡಿದನು. ಪರಶುರಾಮನು ಇದಕ್ಕೆ ಸಮ್ಮತಿಸಿ, ಬೃಹದ್ಯಜ್ಞಕ್ಕೆ ಎಲ್ಲವನ್ನೂ ಸಿದ್ಧಪಡಿಸಿದನು.

ಈ ಯಜ್ಞಕ್ಕೆ ದತ್ತಾತ್ರೇಯನೇ ಆಚಾರ್ಯನಾಗಿದ್ದನು. ಕಶ್ಯಪನೇ ಹೋತೃವಾಗಿದ್ದನು. ಈ ಯಜ್ಞದ ಮಹಿಮೆ, ಹೋತೃನಾದ ಕಶ್ಯಪನಿಗೆ ಸಾಗರಾಂತವಾದ ಭೂಮಿಯನ್ನು ದಾನವಿತ್ತ ವಿಚಾರ, ಆ ಮೇಲೆ ನಿರ್ಮಾಣ ಮಾಡಿದ ಪರಶುರಾಮ ಕ್ಷೇತ್ರದ ವರ್ಣನೆ, ಅಲ್ಲದೆ ಆ ಬ್ರಾಹ್ಮಣ ರಾಜ್ಯದಲ್ಲಿ ಪರಶುರಾಮನು ದಾಶಜಾತಿಯವರಾದ ಮೊಗವೀರರನ್ನು ಬ್ರಾಹ್ಮಣರನ್ನಾಗಿ ಮಾಡಿದ್ದು ಮೊದಲಾದುವುಗಳ ನಿರೂಪಣೆಯು ಪ್ರಾಚೀನ ಗ್ರಂಥವಾದ ಸಹ್ಯಾದ್ರಿಯ ಉತ್ತರ ಖಂಡದಲ್ಲಿ ಕಥಿತವಾಗಿದೆ. ಆ ಗ್ರಂಥದಲ್ಲಿ ಈ ವಿಷಯಗಳನ್ನೆಲ್ಲಾ ಸ್ಕಂದನು ನಾರದನಿಗೆ ವಿವರಿಸಿದ್ದಾಗಿ ಹೇಳಿಯದೆ.

ಯಜ್ಞದ ವೇಳೆಯಲ್ಲಿ ಪರಶುರಾಮನು ಕಶ್ಯಪನಿಗೆ ಸಮುದ್ರವೇ ಮೇರೆಯಾಗಿರುವ ಸಮಸ್ತ ಈ ಭೂಮಂಡಲವನ್ನು ದಕ್ಷಿಣೆಯಾಗಿ ಕೊಟ್ಟನು. ಆಗ ಅಲ್ಲಿ ನೆರೆದಿದ್ದ ಋತ್ವಿಜರಾದ ಬ್ರಾಹ್ಮಣರೆಲ್ಲರೂ ಪರಶುರಾಮನನ್ನು ಕುರಿತು: "ಸಮುದ್ರಾಂತ ಸರ್ವಭೂಮಿಯು

ಈಗ ಬ್ರಾಹ್ಮಣರ ಸ್ವತ್ತಾಗಿದೆ. ಆದ್ದರಿಂದ ನೀನು ದಾನವಿತ್ತ
ಭೂಮಿಯಲ್ಲಿ ವಾಸಮಾಡುವುದು ಪಾಪಕರ. ಬೇರೆ ಎಲ್ಲಾದ
ಹೋಗಿ ಇರು" ಎಂದರು. ಬ್ರಾಹ್ಮಣರ ಈ ಮಾತನ್ನು ಕೇಳಿ "ಹಾಗೆ
ಆಗಲಿ" ಎಂದು ಭೃಗುನಂದನನು ಪರ್ವತಾವಳಿ, ಅರಣ್ಯ ಮೊದಲಾದ
ಗಳನ್ನು ಸಂಚರಿಸುತ್ತ ಪಶ್ಚಿಮ ದಿಕ್ಕಿಗೆ ಹೋದನು.

**ಪರಶುರಾಮ ಕ್ಷೇತ್ರ ನಿರ್ಮಾಣ:** ಭಾರ್ಗವನು ಒಂದು ಪರ್ವ
ಶಿಖರವನ್ನೇರಿ ಸಮುದ್ರವನ್ನು ನೋಡಿ "ಸಮುದ್ರ ರಾಜನೆ! ನೀನು ಹಿಂದ
ಸರಿದು ಹೋಗು. ಈ ಪ್ರದೇಶವನ್ನು ನನಗೆ ಬಿಟ್ಟುಕೊಡು" ಎಂದನ
ಅದಕ್ಕೆ ಸಾಗರರಾಜನು, "ಭಾರ್ಗವ ಮುನಿಯೇ! ನಿನ್ನ ಕೊಡಲಿಯನ
ನನ್ನ ಮೇಲೆ ಬಿಸಾಡು. ಅದು ಬೀಳುವ ವರೆಗೆ ವ್ಯಾಪಿಸಿರುವ ದೇಶವನ
ನಾನು ಸಂತೋಷದಿಂದ ಬಿಟ್ಟುಕೊಡುವೆನು" ಎಂದು ನುಡಿದನು. ಪರ
ರಾಮನು ಕೂಡಲೇ ತನ್ನ ಪರಶುವನ್ನು ಬಿಸಾಡಿದನು. ಸಮುದ್ರರಾಜ
ಕೊಡಲಿ ಬಿದ್ದ ಪ್ರದೇಶವನ್ನು ತನ್ನ ಮೇರೆಯಾಗಿ ಮಾಡಿ ಹಿಂದ
ಸರಿದನು. ಆ ದೇಶವು ಪೂರ್ವಪಶ್ಚಿಮ ಮೂರು ಯೋಜನ ಅಗ
ವಾಗಿತ್ತು. ದಕ್ಷಿಣೋತ್ತರ ಕನ್ಯಾಕುಮಾರಿಯಿಂದ ನಾಸಿಕ ತ್ರ್ಯಂಬ
ಬಕದ ವರೆಗೆ ಮುನ್ನೂರು ಯೋಜನ ಉದ್ದವಿತ್ತು. ಅದನ್ನು ಭಾರ್ಗವ
ಖರಾಟ, ವರಾಟ, ಮರಾಟ, ಕೊಂಕಣ, ಹವಿಗ, ತೌಳವ ಮತ್ತು ಕೇರ
ಎಂಬ ಏಳು ವಿಭಾಗ ಮಾಡಿದನು.

ಅದು ಅಬ್ರಾಹ್ಮಣ್ಯ ದೇಶವಾಗಿತ್ತು. ಅಲ್ಲಿದ್ದ ಬೆಸ್ತ ಜನರನ
ನೋಡಿ, ಬಲೆಯನ್ನು ತಯಾರಿಸುವ ಸೆಣಬಿನ ದಾರದ ತುಂಡನ
ಅವರಿಗೆ ಯಜ್ಞೋಪವೀತವಾಗಿ ಧರಿಸುವಂತೆ ಪರಶುರಾಮನು ಆಜ್ಞಾಪಿ
ದನು. ಈ ಪ್ರಕಾರ ದಾಶ ಜಾತಿಯ ಮೊಗವೀರರನ್ನು ಭೃಗುನಂದನನ
ಬ್ರಾಹ್ಮಣರನ್ನಾಗಿ ಮಾಡಿದನು. (ಸ. ೧.೪೩-೪೪).

ಪರಶುರಾಮನ ತಪಸ್ಸಿನ ಪ್ರಭಾವದಿಂದ ಈ ಪರಶುರಾಮ ನಿರ್ಮ
ಕ್ಷೇತ್ರವು ಧನಧಾನ್ಯ ಸಂಪತ್ತುಳ್ಳದಾಯಿತು. ಅವನು ಅಲ್ಲಿ ಎಲ
ಮಸ್ತು ವಿಶೇಷಗಳನ್ನು ಸೃಷ್ಟಿಸಿದನು. ನವವಿಧಾನದ ಬ್ರಾಹ್ಮಣರನ

ಕರೆದು ಪರಶುರಾಮನು: "ಈ ಪ್ರದೇಶದಲ್ಲಿ ಎಂದೂ ದುರ್ಭಿಕ್ಷೆ ಉಂಟಾಗದು. ಎಂದಾದರೂ ನಿಮಗೆ ವಿಪತ್ತು ಬಂದೊದಗಿದರೆ ನೀವೆಲ್ಲಾ ಸೇರಿ ನನ್ನನ್ನು ಕರೆಯಿರಿ. ನಾನು ಬಂದು ನಿಮ್ಮ ಸಂಕಷ್ಟವನ್ನು ಪರಿಹರಿಸುವೆನು" ಎಂದು ವರವನ್ನು ಕೊಟ್ಟು ಹೋದನು.

ಕೆಲವು ಕಾಲದ ನಂತರ ಈ ಬ್ರಾಹ್ಮಣರೆಲ್ಲಾ ಒಂದು ದಿನ ಒಂದೆಡೆ ಸೇರಿ ಪರಶುರಾಮನು ಕೊಟ್ಟ ವರವನ್ನು ಪರೀಕ್ಷಿಸಬೇಕೆಂದು ಒಕ್ಕೊರಳಿನಿಂದ, "ರಾಮಾ! ರಾಮಾ!" ಎಂದು ಕೂಗಿದರು. ಕೃಪಾನಿಧಿಯಾದ ಭಾರ್ಗವನು ಆ ಕ್ಷಣವೇ ಅವರ ಮುಂದೆ ಪ್ರತ್ಯಕ್ಷನಾಗಿ "ವಿಪ್ರರೆ! ನೀವೆಲ್ಲರೂ ಒಟ್ಟು ಸೇರಿ ಗೋಳಾಡಲು ಕಾರಣವೇನು? ನಿಮಗೆ ಸಂಪ್ರಾಪ್ತವಾದ ಆಪತ್ತೇನು? ಅದೇನಿದ್ದರೂ ಈ ಕ್ಷಣವೇ ನಾನು ನಿವಾರಿಸುತ್ತೇನೆ" ಎಂದು ಅವರನ್ನು ವಿಚಾರಿಸಿದನು. ಅದನ್ನು ಕೇಳಿ, ಆ ಬ್ರಾಹ್ಮಣರು ಭಯದಿಂದ ನಡುಗುತ್ತ, "ಹೆ ವಿಭುವೆ! ನಿಮ್ಮ ಕೃಪೆಯಿಂದ ನಮಗೆ ಯಾವ ವಿಧದ ದುಃಖವೂ ಬಂದೊದಗಿರುವುದಿಲ್ಲ. ನೀವೆಲ್ಲರೂ ಸೇರಿ ಕರೆದರೆ ಬರುತ್ತೇನೆ ಎಂದು ನೀವು ಹೇಳಿದ ವಚನವು ಸತ್ಯವೋ ಅಥವಾ ಸಟಿಯೋ ಎಂದು ಸಂದೇಹಚಿತ್ತರಾಗಿ, ಅದರ ಪರೀಕ್ಷಾರ್ಥವಾಗಿ ನಾವು ಒಟ್ಟಿಗೆ ಸೇರಿ ಗೋಳಿಟ್ಟದ್ದಾಗಿದೆ" ಎಂದರು. ಅವರ ಈ ಮಾತನ್ನು ಕೇಳಿ ಪರಶುರಾಮನು ಕೋಪಗೊಂಡು "ನೀವು ಈ ದೇಶದಲ್ಲಿ ತಂಗುಳನ್ನವನ್ನು ಊಟ ಮಾಡುತ್ತ, ತುಂಡು ವಸ್ತ್ರವನ್ನು ಧರಿಸುತ್ತ, ಕಾನನಗಳಲ್ಲಿ ನಿಂದ್ಯ ಜೀವನವನ್ನು ನಡೆಯಿಸಿ ಬಾಳಿರಿ" ಎಂದು ಶಪಿಸಿ ಮಹೇಂದ್ರ ಪರ್ವತಕ್ಕೆ ಹೊರಟು ಹೋದನು. ಭಾರ್ಗವನು ಹೊರಟು ಹೋದ ಮೇಲೆ ಈ ಪರಶುರಾಮ ಕ್ಷೇತ್ರದಲ್ಲಿದ್ದ ಶಾಪಗ್ರಸ್ಥ ದ್ವಿಜರೆಲ್ಲರೂ ದುಃಖದಿಂದ ಪೀಡಿತರಾಗಿ ಶೂದ್ರಪ್ರಾಯರಾದರು.

ಗತೇತು ಭಾರ್ಗವೆ ರಾಮೆ ತತ್‌ಕ್ಷೇತ್ರಸ್ಥಾ ದ್ವಿಜಾತಯಃ ।
ಶಾಪಗ್ರಸ್ಥಾಃ ಸುದುಃಖಾರ್ತಾ ಶೂದ್ರಪ್ರಾಯಸ್ತದಾ ಭವನ್ ।
(ಸ. ೧-೬೨)

ಎಲ್ಲಿಗೆ ಹೋಗಲಿ? ನನ್ನ ಗತಿಯೇನು? ನಾನು ಎಲ್ಲಿಂದ ಬ್ರಾಹ್ಮಣ
ತಂದು ಸ್ಥಾಪಿಸಲಿ? ಅವರನ್ನು ಹೇಗೆ ತೃಪ್ತಿಗೊಳಿಸಲಿ? ಯಜ
ಕರ್ಮಗಳು, ದೇವಾರಾಧನೆಗಳು ಈ ರಾಜ್ಯದಲ್ಲಿ ಹೇಗೆ ನೆಲೆಗೊ
ವುವು? ಎಂಬುದನ್ನು ಹೇಳಬೇಕು" ಎಂದು ಕೇಳಿಕೊಂಡನು.

## ಕಶ್ಯಪ ಉವಾಚ

ಗಚ್ಛತಾತ ಮಹಾಪ್ರಾಜ್ಞ ಮೇರೋ ದಕ್ಷಿಣತಃ ಶುಭಂ ।
ಅಹಿಚ್ಛತ್ರ ಇತಿಖ್ಯಾತೋ ವಿಪ್ರಾಣಾಮಾದಿ ಮಂಡಲಂ ॥
ಸತ್ವರಂ ಗಚ್ಛಭೂಪಾಲ ಜಾಡ್ಯಂ ಮಾಕುರು ಮಾಕುರು ।
ತತ್ರ ಷಟ್ಕರ್ಮನಿರತಾಃ ಸರ್ವಶಾಸ್ತ್ರ ವಿಶಾರದಾಃ ॥
ಬ್ರಾಹ್ಮಣ ಬಹವಸಂತಿ ತಾನಾನಯ ಮಹೀಪತೆ ।
ಇತ್ಯುಕ್ತ್ವಾ ಕಾಶ್ಯಪ ಶ್ರೀಮಾನ್ ಯಯೌ
ಗೋದಾವರೀಂ ಪ್ರತಿ ॥ (ಸ ೪.೧೯-

ಕಶ್ಯಪನು ರಾಜನ ಪ್ರಾರ್ಥನೆಯನ್ನು ಕೇಳಿ "ಬುದ್ಧಿಶಾಲಿಯ
ರಾಜನೆ! ಮೇರು ಪರ್ವತದ ದಕ್ಷಿಣ ಭಾಗದಲ್ಲಿ ಅಹಿಚ್ಛತ್ರ ಎ
ಪ್ರಸಿದ್ಧ ದೇಶವಿದೆ. ಅದು ಬ್ರಾಹ್ಮಣರ ಆದಿ ಮಂಡಲವು. ತ್ವರಿತನ
ನೀನು ಅಲ್ಲಿಗೆ ಹೋಗು. ಸತ್ಕರ್ಮ ನಿರತರೂ, ಸರ್ವಶಾಸ್ತ್ರವಿ
ರದರೂ ಆಗಿರುವ ಬ್ರಾಹ್ಮಣರು ಬಹುಸಂಖ್ಯೆಯಲ್ಲಿ ಈ ಅಹಿಚ್ಛತ್ರ
ದ್ದಾರೆ. ಅವರನ್ನು ಕರತಂದು ನಿನ್ನ ರಾಜ್ಯದಲ್ಲಿ ಸ್ಥಾಪಿಸು" ಎಂದ
ಈ ಪ್ರಕಾರ ಹೇಳಿ ಕಶ್ಯಪನು ಗೋದಾವರಿ ನದಿಯ ಕುರಿತು ಹೊರ
ಹೋದನು.

ಆ ಮೇಲೆ ಮಯೂರವರ್ಮನು ಹೊರಟು ಅಹಿಚ್ಛತ್ರವನ್ನು ಸ
ವೇದವೇದಾಂಗ ಪಾರಂಗತರಾದ, ಷಟ್ಕರ್ಮನಿರತರಾದ, ಶಾಂತರ
ಮತ್ತು ಮಹಾ ವಿಕ್ರಮಿಗಳಾದ ಬ್ರಾಹ್ಮಣ ಶ್ರೇಷ್ಠರನ್ನು ನೋಡಿದನ
ಅವರ ಮಧ್ಯೆ ಅನೇಕ ಶಿಷ್ಯರಿಂದ ಆವೃತ್ತನಾದ ಸುಮೇಧನೆಂಬ ವಿಪ್ರಶ್ರೇ
ನಿದ್ದನು. ರಾಜನು ಈ ವಿಪ್ರೋತ್ತಮನನ್ನು ಎಂಟು ತಿಂಗಳು ಕಾಲ ಸೇ
ದನು. ಒಂದು ದಿನ ರಾಜನು ಸುಮೇಧುವಿನೊಡನೆ "ಮಹಾ ಪ್ರಾ

ವಿಪ್ರವರ್ಯನೆ! ನಾನು ಗೋರಾಷ್ಟ್ರಕ್ಕೆ ರಾಜನಾಗಿರುವೆನು. ನನ್ನ ರಾಜ್ಯ ದಲ್ಲಿ ಬ್ರಾಹ್ಮಣರಿಲ್ಲದ ಕಾರಣ ಇಲ್ಲಿಗೆ ಬಂದಿರುವೆನು. ನನ್ನ ಮೇಲೆ ಕೃಪೆ ದೋರಿ ನಾನು ಪರಿಶುದ್ಧನಾಗುವ ಬಗೆಯನ್ನು ಅನುಗ್ರಹಿಸಬೇಕು" ಎಂದು ವಿನಂತಿಮಾಡಿಕೊಂಡನು. ಈ ಪ್ರಕಾರ ಪ್ರಾರ್ಥಿಸುವ ಮಯೂರ ವರ್ಮನಿಗೆ ಸುಮೇಧನು ಅಭಯವನ್ನಿತ್ತು ವೇದವೇದಾಂಗ ಪಾರಂಗತ ರಾದ ಶಿಷ್ಯರನ್ನು ರಾಜನೊಡನೆ ಅವನ ರಾಜ್ಯಕ್ಕೆ ಹೋಗುವಂತೆ ಪ್ರೇರೇಪಿಸಿ ಕಳುಹಿಸಿದನು.

ಹೇಮಾಂಗ ರಾಜನ ಮಗನಾದ ಮಯೂರವರ್ಮ ರಾಜನು ಅಹಿಚ್ಛತ್ರದಿಂದ ಕರತಂದ ಪುತ್ರ ಪೌತ್ರ ಸಮೇತರಾದ ದ್ವಿಜಶ್ರೇಷ್ಠರನ್ನು ಪೂಜಿಸಿ, ಧನ, ಸತ್ಕಾರ, ಭೋಜನಾದಿಗಳಿಂದ ಸಂತುಷ್ಟಿಪಡಿಸಿ, ತನ್ನ ರಾಜ್ಯವನ್ನು ಮೂವತ್ತೆರಡು ಗ್ರಾಮಗಳಾಗಿ ವಿಭಾಗಿಸಿ, ಅಗ್ರಹಾರಗಳನ್ನು ಕಟ್ಟಿಸಿ ಅವರನ್ನೆಲ್ಲಾ ಸ್ಥಾಪಿಸಿದನು.

ಕದಂಬಕಾನನೆ ತ್ರೀಣಿಗೋಕರ್ಣೆ ವೇದಸಂಖ್ಯಯಾ ।
ಶುಕ್ತಿಮತ್ಯಾಸ್ತಟೆ ಸಮ್ಯಕ್‌ದ್ವಯಂ ಗ್ರಾಮಂ ಚಕಾರಸ ॥
(೫-೧೪)

ಅಜಪುರ್ಯಾಂ ಚತುರ್ಗ್ರಾಮಾನ್ ಚಕಾರ ವಿಧಿವನ್ನೃಪಃ ।
ಅನಂತೇಶ ಸಮೀಪೇತು ದಶಗ್ರಾಮಾನ್ ಚಕಾರಸಃ ॥
(೫-೧೬)

ಮೂವತ್ತೆರಡು ಗ್ರಾಮಗಳ ವಿಭೇದಕ್ರಮವು ಈ ಪ್ರಕಾರ ವರ್ಣಿ ಸಲ್ಪಟ್ಟಿದೆ. ರಾಜನು ಕದಂಬವನದಲ್ಲಿ ಮೂರು ಗ್ರಾಮಗಳನ್ನು, ಗೋಕರ್ಣ ದಲ್ಲಿ ವೇದಸಂಖ್ಯೆಯಷ್ಟು ಎಂದರೆನಾಲ್ಕು (ಅಥವಾ ಮೂರು?) ಗ್ರಾಮ ಗಳನ್ನು, ಶುಕ್ತಿಮತೀ ತಟದಲ್ಲಿ ಎರಡು ಗ್ರಾಮಗಳನ್ನು ಅಜಪುರಿ (ಬ್ರಹ್ಮಾ ವರ)ದಲ್ಲಿ ನಾಲ್ಕು ಗ್ರಾಮಗಳನ್ನು, ರಜತಪೀಠದ ಅನಂತೇಶ್ವರದ ಬಳಿ (ಉಡುಪಿ) ಹತ್ತು ಗ್ರಾಮಗಳನ್ನು ರಚಿಸಿ ವಿಧಿಪೂರ್ವಕ ಬ್ರಾಹ್ಮಣರನ್ನು ಸ್ಥಾಪಿಸಿದನು.

ರಾಜನು ಗಜಪುರಿ ಎಂಬಲ್ಲಿ ಸರ್ವಶಾಸ್ತ್ರ ನಿಪುಣರನ್ನೂ ಅಗ್ನಿಹೋತ್ರಿ ಗಳನ್ನೂ ಸ್ಥಾಪಿಸಿದನು. ಈ ಗಜಪುರಿಯ ವರ್ಣನೆಯು ಈ ಪ್ರಕಾರವಿದೆ.

ಪ್ರಾಚ್ಯಾಂ ಸಿದ್ಧೇಶ್ವರೋ ಯತ್ರಪಶ್ಚಿಮೆ ಲವಣಾಂಬುಧಿ
(ಸ

ಉತ್ತರೇ ಕೋಟಿ ಲಿಂಗೇಶೋ ಯಸ್ಯ ಸೀತಾ ಹಕ್ಷಿಣೆ ।
ಸವೈ ಕೂಟ ಗ್ರಾಮಮಿತಿ ವಿಖ್ಯಾತಂ ಜಗತೀತಲೆ ॥ (ಸ

(ವಡ್ಡರ್ಶೆ ಗ್ರಾಮದಲ್ಲಿರುವ ಚರ್ಪಟ) ಸಿದ್ಧೇಶ್ವರನು ಪೂರ್ವ ಪಶ್ಚಿಮದಲ್ಲಿ ಲವಣಸಮುದ್ರವೂ, ಉತ್ತರದಲ್ಲಿ ಕೋಟಿ ಲಿಂಗೇಶ್ವ ಮತ್ತು ದಕ್ಷಿಣದಲ್ಲಿ ಸೀತಾನದಿಯೂ ಗಡಿಯು ಮೇರೆಯಾಗಿರುವ ಪ್ರದೇಶವು ಕೂಟಗ್ರಾಮ ಎಂದು ಜಗತ್ತಿನಲ್ಲಿ ವಿಖ್ಯಾತವಾಗಿದೆ ಎಂ ಉಳಿದ ಬ್ರಾಹ್ಮಣರನ್ನು ನೇತ್ರಾವತಿಯ ಉತ್ತರ ತಟದಲ್ಲಿ ಒಂಬತ್ತು ಗ ಗಳನ್ನು ಕಲ್ಪಿಸಿ ಶ್ರೋತ್ರಿಯರಾದ ಬ್ರಾಹ್ಮಣರಿಗೆ ರಾಜನು ಕೊಟ್ಟ ಈ ರೀತಿಯಾಗಿ ಪ್ರತ್ಯೇಕ ಪ್ರತ್ಯೇಕ ಅಗ್ರಹಾರಗಳನ್ನು ಕಟ್ಟಿಸಿ ಬ್ರಾ ರಿಗೆ ದಾನಕೊಟ್ಟು ಮಯೂರವರ್ಮನು ಚಿತ್ತಶಾಂತಿಯನ್ನು ಪಡೆದ

ಅನೇಕ ವರ್ಷ ರಾಜ್ಯಭಾರ ಮಾಡಿದ ಮೇಲೆ ಮಯೂರವರ್ಮ ವೈರಾಗ್ಯವನ್ನು ತಾಳಿ, ತನ್ನ ಮಗನಾದ ಬಾಲಕ ಚಂದ್ರಾಂಗದ ಪಟ್ಟದಲ್ಲಿ ಇಟ್ಟು ರಾಜ್ಯಭಾರವನ್ನು ಮಂತ್ರಿಗಳ ವಶ ನ್ಯಾಸವಾ ತಪಸ್ಸನ್ನಾಚರಿಸಲು ಹೊರಟುಹೋದನು. ಆ ಮಂತ್ರಿಗಳಾ ಹೊಸದಾಗಿ ಬಂದು ನೆಲಸಿದ ಆ ಬ್ರಾಹ್ಮಣರನ್ನು ಉಪೇಕ್ಷಿಸುತ್ತಿ ರಿಂದ ಅವರು ಈ ರಾಷ್ಟ್ರವನ್ನು ಬಿಟ್ಟು ಅಹಿಚ್ಛತ್ರಕ್ಕೆ ಹಿಂದೆ ಹೋ ಅಹಿಚ್ಛತ್ರದವರು ಅವರನ್ನು ನೋಡಿ, ನೀವು ನಮ್ಮ ಬಂಧುಗಳಾಗಿ ಹಾದರೂ ಕೆಲಕಾಲ ಗೋರಾಷ್ಟ್ರದೇಶದಲ್ಲಿ ನೆಲಸಿದಿರಾದ ಕಾರಣ ನಮ್ಮೊ ಸೇರಿರಲು ಸಾಧ್ಯವಿಲ್ಲ" ಎಂದು ಅವರನ್ನು ತಿರಸ್ಕರಿಸಿದರು. ಆದ್ದ ಅವರೆಲ್ಲರೂ ಅಹಿಚ್ಛತ್ರದ ಹೊರಭಾಗದಲ್ಲಿ ನೆಲಸಬೇಕಾಯಿತು.

**ಚಂದ್ರಾಂಗದನು ಬ್ರಾಹ್ಮಣರನ್ನು ಸ್ಥಾಪಿಸಿದ್ದು:** ಹಲವು ವ ಗಳ ಮೇಲೆ ಚಂದ್ರಾಂಗದನು ಪ್ರಾಪ್ತವಯಸ್ಕನಾಗಿ ರಾಜ್ಯಭಾರ ವಹಿಸಿ ತನ್ನ ಪಿತನು ಸ್ಥಾಪಿಸಿದ್ದ ಬ್ರಾಹ್ಮಣರೆಲ್ಲರೂ ಅಹಿಚ್ಛ ಹಿಂತಿರುಗಿದರೆಂದು ತಿಳಿದು, ಅವರನ್ನು ಕರತರಲು ಅಲ್ಲಿಗೆ ಹೋದ

ಆ ಬ್ರಾಹ್ಮಣರನ್ನು ಕರತಂದು ಗ್ರಾಮಗಳಲ್ಲಿ ಗೃಹಭೇದಗಳನ್ನು ಶಿಖಿಯನ್ನು ಧರಿಸುವ ಕ್ರಮದಲ್ಲಿ ಚೂಡಾಕರ್ಮ ಭೇದವನ್ನು ನಿರ್ಮಿಸಿ ಸ್ಥಾಪಿಸಿದನು.

ಶಿವಬಳ್ಯಾಂ ವಿಶೇಷಜ್ಞಃ ವಿಂಶದ್ಭೇದಂ ಶತೋತ್ತರಂ ॥
ಶ್ರೇಷ್ಠದಶಾದೌ ತದ್ವಚ್ಚ ಚತ್ವಾರಿಂಶಚ್ಚ ಮಧ್ಯಮಾಃ ।
ಅಂತ್ಯೇ ಸಪ್ತತಿರಿತ್ಯೇವಂ ಚೋತ್ತಮಾಧಮ ಮಧ್ಯಮಃ ॥
(ಸ ೬.೧೮-೧೯)

**ಗ್ರಾಮಭೇದಗಳು ವಿವಿಧವಾಗಿವೆ:** ಶಿವಬೆಳ್ಳಿ ಗ್ರಾಮಗಳಲ್ಲಿ ನೂರಿಪ್ಪತ್ತು ಗೃಹಭೇದಗಳಿವೆ. ಇವುಗಳಲ್ಲಿ ಮೊದಲನೆಯ ಹತ್ತು ಉತ್ತಮವಾದವು. ನಂತರದ ನಲ್ವತ್ತು ಮಧ್ಯಮವಾದುವು. ಉಳಿದ ಎಪ್ಪತ್ತು ಅಧಮವಾದವು.

ಅಜಪುರಿ ಎಂಬ ಬ್ರಹ್ಮಾವರದಲ್ಲಿ ಎಂಟು ಮತ್ತು ನೀಲಾವರದಲ್ಲಿ ಎಂಟು ಪ್ರಭೇದಗಳನ್ನು ರಾಜನು ಕಲ್ಪಿಸಿದನು. ಕೂಟ ಗ್ರಾಮದಲ್ಲಿ ಎಂಟು ಗೃಹಭೇದಗಳನ್ನು ಮತ್ತು ಸ್ಕಂದಪುರ ಎಂಬ ಕಂದಾವರದಲ್ಲಿ ಎರಡು ಗೃಹಭೇದಗಳನ್ನು ಮಾಡಿದನು. ಕೂಟದ ಎಂಟು ಗೃಹಭೇದ, ಅಗ್ನಿಹೋತ್ರಾದಿ ವಿವರಗಳನ್ನು ಮುಂದೆ ಕೊಡುವುದರಿಂದ ಇಲ್ಲಿ ಹೇಳಿರುವುದಿಲ್ಲ. ಚಂದ್ರಾಂಗದ ರಾಜನು ತಿರುಗಿ ಈ ಪ್ರಕಾರ ಪೂರ್ವದ ಹದಿನಾರು ಗ್ರಾಮಗಳನ್ನು ಪಶ್ಚಿಮದ ಹದಿನಾರು ಗ್ರಾಮಗಳಲ್ಲಿ ಅವಾಂತರ ಭೇದ, ಗೃಹಭೇದಗಳನ್ನು ಕಲ್ಪಿಸಿದನು.

ಕದಂಬ ವಂಶೋತ್ಪತ್ತಿಯು ಮೊದಲುಗೊಂಡು ಚಂದ್ರಾಂಗದ ರಾಜನು ಗೃಹಭೇದಾದಿಗಳನ್ನು ಕಲ್ಪಿಸಿದ ವರೆಗಿನ ವಿಚಾರವು ಸಹ್ಯಾದ್ರಿಯ ಉತ್ತರ ಖಂಡದ ಮೊದಲನೆಯ ಆರು ಅಧ್ಯಾಯಗಳಲ್ಲಿ ನಿರೂಪಿತವಾಗಿದೆ. ಮುಂದಿನ ಕಥಾಂಶವು ಲೋಕಾದಿತ್ಯ ಪದ್ಧತಿ ಮತ್ತು ಶ್ರೀ ಸಾಲಿಗ್ರಾಮ ಮಾಹಾತ್ಮ್ಯೆಯಲ್ಲಿ ವಿಷಧವಾಗಿ ವರ್ಣಿಸಲ್ಪಟ್ಟಿದೆ.

ಚಂದ್ರಾಂಗದರಾಜನು ಅರಿಷ್ಟಕಾರಕನಾದ ಲೋಕಾದಿತ್ಯನೆಂಬ ಪುತ್ರನನ್ನು ಪಡೆದು ಸ್ವರ್ಗಸ್ಥನಾದನು. ಅನಂತರ ಹುಬ್ಬಾಸಿಕನೆಂಬ ದುಷ್ಟನು ದೇಶವನ್ನು ಪೀಡಿಸತೊಡಗಿದನು. ಆಗ ಕಲಿಯುಗದಲ್ಲಿ

ಗಿಟ್ಟಿಶಿ ಸಂದಿತ್ತು. ಬ್ರಾಹ್ಮಣರಲ್ಲಿ ಬಹುಮಂದಿ ಹುಬ್ಬಾಸಿಕನ
ಯನ್ನು ಸಹಿಸಲಾರದೆ ಅಹಿಚ್ಛತ್ರಕ್ಕೆ ಹಿಂತಿರುಗಿದರು. ಕೆಲವರು
ಹುಬ್ಬಾಸಿಕನ ಅನುವರ್ತಿಗಳಾಗಿ ಅಲ್ಲೇ ಬಾಳಿದರು.

ಪ್ರಾಪ್ತವಯಸ್ಕನಾದ ಲೋಕಾದಿತ್ಯನು ಪಟ್ಟಾಭಿಷಿಕ್ತನಾಗಿ
ಸಮಾನ ವರ್ಚಸ್ಸನ್ನು ಪಡೆದು ಬಹುದೇಶಗಳನ್ನು ಜಯಿಸಿದನು.
ಸರ್ವ ವಿದ್ಯೆಗಳಲ್ಲಿ ಸುಶಿಕ್ಷಿತನು ಮತ್ತು ರಾಜನೀತಿಸ್ವರೂಪನ
ದ್ದನು. ಆ ಕಾಲದಲ್ಲಿ ಗೋರಾಷ್ಟ್ರ ರಾಜ್ಯವಾಳುತ್ತಿದ್ದ ಮಹಾ
ನಾದ ಚಂಡಸೇನನೆಂಬ ರಾಜನ ತಂಗಿ ಕನಕಾವತೀ ಎಂಬವ
ವಿವಾಹಿತನಾದನು. ಬಾವ ಚಂಡಸೇನನ ಸಹಾಯದಿಂದ ಲೋ
ದಿತ್ಯನು ಹುಬ್ಬಾಸಿಕನನ್ನೂ ಮತ್ತು ಅವನ ಸಕಲ ಸೈನ್ಯಪರಿವಾರ
ಯುದ್ಧದಲ್ಲಿ ಜಯಿಸಿದನು. ಈ ಪ್ರಕಾರ ಪ್ರಾಪ್ತವಾದ ಪೈತ್ರಿಕ
ದಲ್ಲಿ ಲೋಕಾದಿತ್ಯನು ನೆಲಸಿ ರಾಜ್ಯಭಾರವನ್ನು ಮಾಡತೊಡಗಿದನ

**ಲೋಕಾದಿತ್ಯನು ಅಹಿಚ್ಛತ್ರದಿಂದ ಬ್ರಾಹ್ಮಣರನ್ನು ತ**
**ನೆಲೆಸಿದ್ದು:** ತನ್ನ ದೇಶವನ್ನು ಬ್ರಾಹ್ಮಣರು ತ್ಯಜಿಸಿಹೋದ ವಿ
ವನ್ನು ತಿಳಿದು ಲೋಕಾದಿತ್ಯನು ಅಹಿಚ್ಛತ್ರಕ್ಕೆ ಹೋದನು. ರ
ಆಗಮನವನ್ನು ನೋಡಿ ಆ ದೇಶದ ಬ್ರಾಹ್ಮಣರೆಲ್ಲಾ ಸೇರಿ, ರಾಜ
ಸಂದರ್ಶಿಸಿದರು. ಮಯೂರವರ್ಮನ ಮೊಮ್ಮಗನು ಮತ್ತು ಸ
ವತ್ಸಲನಾದ ರಾಜನನ್ನು ನೋಡಿ ಆನಂದದಿಂದ ಧ್ವನಿಗೈದರು. ರಾ
ಅವರೆಲ್ಲರನ್ನು ಅರ್ಘ್ಯವಸ್ತ್ರಾದಿಗಳಿಂದ ಪೂಜಿಸಿದನು. ಆ ವಿಪ್ರ ಸ
ಜದ ಮಧ್ಯೆ ಜಗತ್ಪೂಜ್ಯನೂ ವಿಷ್ಣು ವಂಶಜನೂ ಆದ ಭಟ್ಟಾಚಾ
ನೆಂಬ ದ್ವಿಜನು ಪ್ರಕಾಶಿಸುತ್ತಿದ್ದನು. ರಾಜನು ಭಟ್ಟಾಚಾರ್ಯನ
ವನ್ನು ಹೊಂದಿದನು.

ಅಷ್ಟಕ್ಕೆ ಭಟ್ಟಾಚಾರ್ಯನಿಗೆ ಸ್ವಪ್ನದಲ್ಲಿ ಗಣಪತಿಯು ತೋ
ಕೊಂಡು "ಯಾವ ಸ್ಥಳದಲ್ಲಿ ಗಜ ಮತ್ತು ಸಿಂಹ ಇವೆರಡು ನಿ
ದಿಂದಿರುವರೋ ಆ ನನ್ನ ಪರಮಪೂಜ್ಯ ಮತ್ತು ಜಗತ್ತಿನಲ್ಲಿ ವಿ
ವಾಗಿರುವ ಶ್ರೀ ಸಾಲಿಗ್ರಾಮ ಕ್ಷೇತ್ರಕ್ಕೆ ಲೋಕಾದಿತ್ಯನೆಂಬ
ನೊಡನೆ ಹೋಗು" ಎಂದು ಆದೇಶಕೊಟ್ಟನು.

ಯಸ್ಮಿನ್ ಸ್ಥಲೇ ಗಜಃ ಸಿಂಹೋ ನಿರ್ವೈರೋ ಭೇದತಾಂಗತಃ
ಲೋಕಾದಿತ್ಯೇನ ಭಕ್ತೇನ ತತ್ಸ್ಥಲಂ ಗಚ್ಛ ಮಾಮುಕಂ।
ಇತಿ ಭಟ್ಟಃ ಸ್ವಯಂ ಸ್ವಪ್ನೇ ಕಥಾಂ ಗಣಪತೀರಿತಾಂಕ್ವಿ
(ಸಾ.ಮಾ)

ಭಟ್ಟಾಚಾರ್ಯನು ತನ್ನ ಸ್ವಪ್ನದ ಕಥೆಯನ್ನು ಆ ಬ್ರಾಹ್ಮಣರಿಗೆ ವರಿಸಿದನು. ಇದನ್ನು ಕೇಳಿ ಬ್ರಾಹ್ಮಣರೆಲ್ಲಾ ಆಶ್ಚರ್ಯಗೊಂಡರು. ಟ್ಟಾಚಾರ್ಯನು ಅಹಿಚ್ಛತ್ರಕ್ಕೆ ಬಂದಿರುವ ಲೋಕಾದಿತ್ಯನೊಡನೆ ಅವನು ಂದ ಉದ್ದೇಶವನ್ನು ಕೇಳಲು ಲೋಕಾದಿತ್ಯನು ಆ ಬ್ರಾಹ್ಮಣಶ್ರೇಷ್ಠನನ್ನು ಮಸ್ಕರಿಸಿ ಹೀಗೆಂದನು: "ಬ್ರಹ್ಮಸ್ವರೂಪನೆ! ಈ ಬ್ರಾಹ್ಮಣ ಸಮುದಾಯ ಂದ ನನ್ನ ಕದಂಬ ರಾಷ್ಟ್ರವನ್ನು ತುಂಬಿಸುವವನಾಗು. ಇವರೆಲ್ಲರಿಗೂ ನೇಕ್ಷೇತ್ರಭೂಮ್ಯಾದಿಗಳನ್ನು ವಿಫಲವಾಗಿ ಕೊಡುವೆನು. ಆದುದರಿಂದ ಇವರು ನನ್ನ ರಾಷ್ಟ್ರಕ್ಕೆ ನನ್ನೊಡನೆ ತೆರಳಲಿ. ನಿನ್ನ ಪರಿಮುಖದಿಂದ ಇವರು ಸುಖಸಾಮ್ರಾಜ್ಯವನ್ನು ಅನುಭವಿಸುವವರಾಗಲಿ". ರಾಜನ ಈ ಮಾತನ್ನು ೕಳಿ ಭಟ್ಟಾಚಾರ್ಯನು ಆ ಬ್ರಾಹ್ಮಣರ ಸಹಿತ ಪ್ರಸ್ಥಾನಗೈದನು. ನರೆಲ್ಲರನ್ನು ರಾಜನು ಕರತಂದು, ಪರಶುರಾಮಕ್ಷೇತ್ರವನ್ನು ಹೈವ, ೌಳವ ಮತ್ತು ಕೇರಳ ಎಂಬ ಮೂರೇ ವಿಭಾಗ ಮಾಡಿ, ಹೈವದಲ್ಲಿ ದಿನಾರು, ತೌಳದಲ್ಲಿ ಮೂವತ್ತೆರಡು ಮತ್ತು ಕೇರಳದಲ್ಲಿ ಅರುವತ್ತ ಾಲ್ಕು ಗ್ರಾಮಗಳನ್ನು ನಿರ್ಮಿಸಿ ಆ ಬ್ರಾಹ್ಮಣ ಸಂಕುಲವನ್ನು ವಿಧಿ ತ್ತಾಗಿ ಸ್ಥಾಪಿಸಿದನು. ಆಗ ಕಲಿಯುಗ ೧೬೪೯ ನಡೆಯುತ್ತಿತ್ತು.

**ಕೂಟಗ್ರಾಮದ ಅಷ್ಟಗೃಹ ವಿಧಾನ:** ಈ ಪ್ರಕಾರ ಸ್ಥಾಪಿತವಾದ ಧರ್ಮರಾಜ್ಯಕ್ರಮವು "ಲೋಕಾದಿತ್ಯ ಪದ್ಧತಿ" ಎಂದು ವಿಖ್ಯಾತವಾಗಿದೆ. ಇದರ ತಾಡಪತ್ರ ಪ್ರತಿಗಳು ಕೋಟ ಮಾಗಣೆಯಲ್ಲಿ ಕೆಲವರಲ್ಲಿವೆ. ಅದರಲ್ಲಿ ಕೂಟಗ್ರಾಮದ ಅಷ್ಟಗೃಹ ವಿಧಾನವನ್ನು ಈ ಪ್ರಕಾರ ವಿವರಿಸಿದೆ.

**ಹಂದೆ ಭಾಸುರಿ ತುಂಗಾಶ್ಚ ನವೋಢೋ ಹೊಳ್ಳಮಯ್ಯಕಾಃ।**
**ಹೆಬ್ಬಾರ ಕಾರ್ಯವಂತೌಶ್ಚ ಹ್ಯಷ್ಟಗೃಹ ಸಮಾಶ್ರಿತಾಃ ॥**
**(ಲೋ)**

ಹಂದೆ, ಭಾಸುರಿ, ತುಂಗ, ನವೋಢ, ಹೊಳ್ಳ, ಮಯ್ಯ, ಹೆ
ಮತ್ತು ಕಾರ್ಯಾವಂತ; ಇವರೆಂಟು ಕೂಟ ಗ್ರಾಮದ ಸಮಾಶ್ರಿತ
ಭೇದಗಳು.

ಅಥಯಜ್ಞಂ ಕಾರತಟ್ಟೌ ಅಗ್ನಿಷ್ಟೋಮಾದಿ ಪುಂಡ್ರಕಂ ।
ಕೃತ್ವಾದತ್ವಾನ್ಯಗ್ರಾಮೇಷು ಕೃತ ಸಂಜ್ಞಾ ಮಹತ್ತರಂ ॥
ಕೃತ್ವಾಗ್ರಹಾರಂ ದತ್ವಾರ್ಥಮುಪಸ್ಕರಣ ಸಂಯುತಂ ।
ಸಪತ್ನಿಕಾನ್ಬ್ರಾಹ್ಮಣಾಂಶ್ಚ ಸಂಪೂಜ್ಯಾಭರಣೈಃ ಸಹ
ಗೋಮಹೀಷ್ಯಾದಾದೀಶ್ಚಯಥಾ ನಿಷ್ಕಪ್ರಮಾಣತಃ ॥
ಶಾಲ್ಮಲ್ಯಾದಕ್ಷಿಣೇ ಪೂರ್ವೇ ವಾರಿಧೆ ಪಶ್ಚಿಮಸ್ಯತು
ಸೀತಾಯಾಉತ್ತರಃ ಸಹ್ಯ ಪರ್ವತಸ್ಯ ಪಶ್ಚಿಮೇ ।
ತಾವದ್ದೇಶೇ ತಾಂತ್ರಿಕತ್ವಂ ಯಾಜನಂ ಸರ್ವಸತ್ಕ್ರಿಯಾಮ
ಸಪತ್ನೀಕಾಯ ವಿಪ್ರಾಯ ಬ್ರಹ್ಮಕಾರ್ಯವತೇ ತದಾ ॥

(ಲೊ

ಲೋಕಾದಿತ್ಯನು ಕಾರತಟ್ಟು (ಈಗಿನ ಚಿತ್ರಪಾಡಿ ಗ್ರಾಮ) ಎಂ
ಅಗ್ನಿಷ್ಟೋಮಾದಿ ಪುಂಡ್ರಕ ಯಜ್ಞವನ್ನು ಮಾಡಿ, ಬ್ರಹ್ಮಕಾರ್ಯವ
ನನ್ನು ಸಪತ್ನೀಕನಾಗಿ ಪೂಜಿಸಿ, ನಿವಾಸಮಾಡಲು ಯೋಗ್ಯ ಅಗ್ರಹ
ವನ್ನು ನಿರ್ಮಿಸಿ ಸಕಲ ಉಪಕರಣ ಸಹಿತವಾಗಿ ದಾನಕೊಟ್ಟ
ಅಲ್ಲದೆ ಸಕಲ ವಸ್ತ್ರಾಭರಣ, ಗೋವು, ಎಮ್ಮೆ, ದಾಸೀ ಜನ ಮತ್ತು
ವನ್ನು ಆ ಕಾರ್ಯವಂತಗೆ ಕೊಟ್ಟನು.

ಶಾಲ್ಮಲಿಯ ದಕ್ಷಿಣ, ಸಮುದ್ರ ತೀರದ ಪೂರ್ವ, ಸಹ್ಯ ಪರ್ವ
ಪಶ್ಚಿಮ ಮತ್ತು ಸೀತಾ ನದಿಯ ಉತ್ತರ ಇರುವ ದೇಶದ ತಾಂ
ಯಾಜನ ವೃತ್ತಿಯನ್ನು ಈ ಬ್ರಹ್ಮಕಾರ್ಯವಂತನಿಗೆ ಅನುಗ್ರಹಿಸಿದ
ಕಾರಂತನು ವಿಶ್ವಾಮಿತ್ರ ಗೋತ್ರೋತ್ಪನ್ನನು. ಈ ಗೃಹದಲ್ಲಿ ಪ್ರಭೇದವ
ರಾಜನು ಕಲ್ಪಿಸಿರುವುದಿಲ್ಲ. ಯಜ್ಞಯಾಗಾದಿಗಳನ್ನು ಸಾಂಗವಾಗಿ
ನೇರಿಸುವುದಕ್ಕಾಗಿ ಕಾರತಟ್ಟು ಪ್ರದೇಶವು ಉತ್ತಾರವಾಗಿ ಕೊಡಲ್ಪಟ್ಟ
ಕಾರಂತನಲ್ಲಿ ಒಂದೇ ಗೃಹಭೇದ.

ಪಾರಂಪಳ್ಯಾ ಗ್ರಾಮಮಧ್ಯೆ ವಾಜಪೇಯಾತಿರಾತ್ರಿಕೌ ।
ಸಂಮ್ಯಕ್ ಕೃತ್ವಾ ವಿಧಾನೇನ ಬ್ರಾಹ್ಮಣೇಭ್ಯೋದದೌತದಾ॥
ಹೆಬ್ಬಾರಶ್ಚ ದ್ವಿಭೇದೇನ ಹೊಳ್ಳದ್ವಿವಿಧಃ ಭೇದಿತಃ ।
ತೇಭ್ಯಶ್ಚತುಷ್ಟಯಂ ಗೇಹಂ ಸರ್ವೋಪಕರಣಾನ್ವಿತವ್ ॥
(ಲೋ)

ಪಾರಂಪಳ್ಳಿ ಎಂಬ ಗ್ರಾಮದ ಮಧ್ಯ ವಾಜಪೇಯ ಮತ್ತು ಅತಿ ಾತ್ರಿಕ ಯಜ್ಞವನ್ನು ಮಾಡಿ, ರಾಜನು ಹೆಬ್ಬಾರರಲ್ಲಿ ಎರಡು ಭೇದದಿಂದ ಬ್ಬರಿಗೂ, ಹೊಳ್ಳರಲ್ಲಿ ದ್ವಿವಿಧ ಭೇದದಿಂದ ಇಬ್ಬರಿಗೂ, ಹೀಗೆ ನಾಲ್ವರು ಹಭೇದರಾದ ಬ್ರಾಹ್ಮಣರಿಗೆ ಸರ್ವೋಪಕರಣ ಸಹಿತ ಮನೆಯನ್ನು ವಿಧಿ ಧಾನದಿಂದ ದಾನವಿತ್ತನು. ಹೆಬ್ಬಾರನು ಕಾಶ್ಯಪ ಗೋತ್ರೋತ್ಪನ್ನನು. ೂಳ್ಳನ ಗೋತ್ರವು ಆಂಗೀರಸವು. ಹೆಬ್ಬಾರರಲ್ಲಿ ಎರಡು ಮತ್ತು ೂಳ್ಳರಲ್ಲಿ ಎರಡು ಗೃಹಭೇದಗಳನ್ನು ರಾಜನು ಮಾಡಿದನು.

ಕಾರಕಾಡು ಗ್ರಾಮ ಮಧ್ಯೆತರು ನಾಗ್ನಿಜಯಾದಿಕಂ
ಸಂಮ್ಯಕ್ಕೃತ್ವಾ ವಿಧಾನೇನ ಬ್ರಾಹ್ಮಣೇಭ್ಯೋದದೌತದಾ ।
ನವೋಢ್ವದ್ವಯಭೇದೇನ ಭೂಮರ್ಯಾದಿಕಾಂ ಸ್ತಥಾ
ಗೃಹದ್ವಯಂ ಸರ್ವೋಪಕರಣಂ ಯಥಾಯೋಗ್ಯಾನು
ಸಾರತಃ ॥ (ಲೋ)

ಕಾರಕಾಡು ಎಂಬ ಗ್ರಾಮದಲ್ಲಿ (ಈಗಿನ ಕಾರ್ಕಡ) ಕೇವಲ ಮಣಾಗ್ನಿ ವೃತ್ತಿಯನ್ನು (ಅಗ್ನಿಹೋತ್ರವನ್ನು ಮಾತ್ರ) ಸ್ಥಾಪಿಸಿ ನವೋಢ ಲ್ಲಿ ಎರಡು ಭೇದದಿಂದ ಇಬ್ಬರಿಗೆ ಸರ್ವೋಪಕರಣ ಸಹಿತ ಮನೆಗಳನ್ನು ೂಮಿಯನ್ನು ಯೋಗ್ಯತಾನುಸಾರ ಮರ್ಯಾದೆಯನ್ನು ರಾಜನು ೂಟ್ಟನು. ನವೋಢನು ಅತ್ರಿಗೋತ್ರೋತ್ಪನ್ನನು. ಇಲ್ಲಿ ಎರಡು ಗ್ರಹ ೇದವಿದೆ.

ಹರತಟ್ಟು ಗ್ರಾಮ ಮಧ್ಯೇ ವಾಜಪೇಯಗ್ನಿ ಯಾಜ್ಞಿಕಂ ।
ಕಾರಯಿತ್ವಾ ವಿಧಾನೇನ ಬ್ರಾಹ್ಮಣೇಭ್ಯೋ ದದೌಮುದಾ ॥
ಮಯ್ಯಶ್ಚವೇದ ಸಂಖ್ಯಾಕಾಃ ತಥಾ ಹೇರಳಕಾಸ್ತ್ರಯ ।

ತೇಭ್ಯ ಸಪ್ತಗೃಹಾನ್ ಸರ್ವಾನ್ ಸರ್ವೋಪಕರಣಾನ್ವಿತಾ
ಕದಂಶ ಭೂಮಿಂ ಮರ್ಯಾದಾಂಶ್ಚಾನ್ಯಾನ್ ಯೋಗ
ಸಾರತಃ ॥ (ಲ

ಆ ಮೇಲೆ ಹರತಟ್ಟು ಗ್ರಾಮದಲ್ಲಿ ವಾಜಪೇಯಾಗ್ನಿ ಯಜ್ಞ ಮಾಡಿ, ರಾಜನು ಮಯ್ಯಗೃಹದಲ್ಲಿ ನಾಲ್ಕು ಭೇದದಿಂದ ನಾಲ್ವರಿ ಮತ್ತು ಹೇರಳ ಗೃಹದಲ್ಲಿ ಮೂರು ಭೇದದಿಂದ ಮೂರು ಜನರಿಗೂ ಏಳು ಬ್ರಾಹ್ಮಣರಿಗೆ ಸರ್ವೋಪಕರಣ ಸಹಿತ ಗೃಹಗಳನ್ನು ಭೂ ಮರ್ಯಾದೆಯನ್ನು ಯೋಗ್ಯತಾನುಸಾರ ಕೊಟ್ಟನು. "ಮಯ್ಯಭೇದ ಹೇರಳಃ" ಎಂದಿದೆ. ಹೇರಳ ಎಂಬುದು ಮಯ್ಯ ಭೇದವೇ ಆಗಿದೆ. ಇ ಗೋತ್ರ ವಸಿಷ್ಠ. ಮಯ್ಯರಲ್ಲಿ ನಾಲ್ಕು ಮತ್ತು ಹೇರಳರಲ್ಲಿ ಮೂ ಹೀಗೆ ಏಳು ಗೃಹಭೇದಗಳಾದುವು.

ಕೋಟತಟ್ಟು ಗ್ರಾಮಮಧ್ಯೆಯಾಗಂ ಪುಂಡ್ರಕ ಸಂಜ್ಞಕ
ಪೂರ್ವವತ್ ಯಜ್ಞಮಕರೋದ್ದೇವಾನ್ ಸಂತರ್ಪ್ಯಯ
ತುಂಗಾಸಂಜ್ಞಾಯ ವಿಪ್ರಾಯ ಗೇಹಂ ಚೋಪಸ್ಕರಾನ್ವಿತ
ತದಂಶ ಭೂಮಿಂ ಮರ್ಯಾದಾಂ ದದೌಯೋಗ್ಯಾನು
ಸಾರತಃ ॥ (ಲೊ

ಕೋಟತಟ್ಟು ಗ್ರಾಮದಲ್ಲಿ ಪುಂಡ್ರಕ ಯಾಗವನ್ನು ನೆರವೇ ತುಂಗ ಎಂಬ ಒರ್ವ ಬ್ರಾಹ್ಮಣನಿಗೆ ಸರ್ವೋಪಕರಣ ಸಹಿತ ಗೃಹವ ಭೂಮಿಯನ್ನು ಯೋಗ್ಯತಾನುಸಾರ ಮರ್ಯಾದೆಯನ್ನು ರಾಜ ಕೊಟ್ಟನು. ತುಂಗನ ಗೋತ್ರ ವಿಶ್ವಾಮಿತ್ರ. ತುಂಗಗೃಹದಲ್ಲಿ ಭೇದವಿಲ್ಲ

ಹಂದಟ್ಟು ಗ್ರಾಮಮಧ್ಯೇತು ಚಾತುರ್ಮಾಸ್ಯಾದಿ
ಯಜ್ಞಕಮ್
ಕಾರ್ಯಯಿತ್ವಾ ಯಥಾಯೋಗ್ಯಂ ದತ್ವಾ ದಾನಾಗಿ
ಭೂರಿಶ
ಭಾಸುರಿ ದ್ವಯ ಭೇದಾಯ ಪೃಥಕ್ ಹಂದೇಕ ಸ್ಮೃತಃ ।
ಗೃಹತ್ರಯಂ ಬ್ರಾಹ್ಮಣೇಭ್ಯೋ ಸರ್ವೋಪಸ್ಕರಾ
ಸಂಯುತಮ್ ॥ (ಲೊ

ಕೊನೆಯದಾಗಿ ಹಂದಟ್ಟು ಗ್ರಾಮದಲ್ಲಿ ಚಾತುರ್ಮಾಸ್ಯಾದಿ ಜ್ಞವನ್ನು ಸಾಂಗಗೊಳಿಸಿ ಲೋಕಾದಿತ್ಯನು ಭಾಸುರಿ ಗೃಹದಲ್ಲಿ ರಡು ಭೇದದಿಂದ ಇಬ್ಬರಿಗೂ, ಮತ್ತು ಹಂದೇ ಸಂಜ್ಞಕ ಗೃಹದಲ್ಲಿ ಂದೇ ಭೇದದಿಂದ ಒಬ್ಬನಿಗೂ ಹೀಗೆ ಮೂವರು ಬ್ರಾಹ್ಮಣರಿಗೆ ಸರ್ವೋ ಸ್ಕರಯುತವಾದ ಗೃಹಗಳನ್ನು ಭೂಮಿ ಮರ್ಯಾದೆಯನ್ನು ಯೋಗ್ಯ ಾನುಸಾರ ಕೊಟ್ಟನು. ಭಾಸುರಿ ಮತ್ತು ಹಂದೆ ಇವರು ವಿಶ್ವಾಮಿತ್ರ ೋತ್ರದವರು. ಭಾಸುರಿಯಲ್ಲಿ ಎರಡು ಗೃಹಭೇದ ಹೇಳಿದೆ. ಹಂದೆ ಲ್ಲಿ ಗೃಹಭೇದವಿಲ್ಲ. ಹಂದೆ ಭೇದವೇ ಉರಾಳ.

ಈ ಪ್ರಕಾರ ಅಷ್ಟಗೃಹಗಳಲ್ಲಿ ಹದಿನೆಂಟು ಗೃಹಭೇದಗಳು ಕಲ್ಪಿ ಸಲ್ಪಟ್ಟವು. ಈ ಪ್ರಕಾರ ಇರುವ ಈ ಷಡ್ಗ್ರಾಮಗಳನ್ನು ಶ್ರೀ ಸಾಲಿ ಗ್ರಾಮ ಕ್ಷೇತ್ರದಲ್ಲಿರುವ ಶ್ರೀ ಯೋಗಾನಂದ ಗುರುನರಸಿಂಹ ದೇವ ಸ್ಥಾನದಲ್ಲಿ ಪ್ರಸಾದ ವಿತರಣೆ ಕಾಲದಲ್ಲಿ ಮೊದಲು ಕರೆಯುತ್ತಾರೆ.

ಈ ಪ್ರಕಾರ ಎಂಟು ಅಗ್ನಿಹೋತ್ರಿಗಳು ಕೂಟ ಗ್ರಾಮದಲ್ಲಿ ಸ್ಥಾಪಿತರಾದರು. ಅನಂತರ ಹಂದಟ್ಟಿನಲ್ಲಿ ಅಧ್ವರ್ಯನನ್ನೂ, ಕಾರ್ಕಡ ಲ್ಲಿ ಬ್ರಹ್ಮನನ್ನೂ, ಂಡ್ಮಿಯಲ್ಲಿ ಹೋತೃನನ್ನೂ ಮತ್ತು ಅಗ್ನೀಧರನನ್ನೂ ೀಗೆ ನಾಲ್ಕು ಅಗ್ನಿಹೋತ್ರ ವೃತ್ತಿಯನ್ನು ರಾಜನು ಸ್ಥಾಪಿಸಿದನು.

**ಷಡ್ಗ್ರಾಮಕೇ ಅಗ್ನಿಹೋತ್ರಂಚ ತಥಾ ದ್ವಾದಶ**
**ಸಂಜ್ಞಕಮ್ ॥ (ಲೋ)**

ಆದ್ದರಿಂದ ಅಗ್ನಿಹೋತ್ರಗಳು ಹನ್ನೆರಡು ಎಂದಿದೆ.

**ಯಸ್ಮಿನ್ ಸ್ಥಲೇ ಗಜಃ ಸಿಂಹೋ ನಿರ್ವೈರ್‍ಯೋ**
**ಭೇದಕಾಂಗತಃ ॥** (ಸಾ.ಮ.೩-೮೭)
**ಅಗ್ರಪೂಜಾಂಚ ಮರ್ಯಾದಾಂ ತಥಾ ಷೋಡಶ ಸಂಜ್ಞಕಮ್।**
**ದತ್ವಾ ಕಾರ್ಯರ್ವತೆ ಸರ್ವಂ ಸುವೇಶ್ಮಕರಣಾನ್ವಿತಮ್ ॥**
**ಬ್ರಹ್ಮಜ್ಞಾನಕೃತ್ಸ್ವ ಸಂಪನ್ನ ಬ್ರಾಹ್ಮಣಾಯ ದದೌಮುದಾ**
**ಮಹಾಗಣಪತಿಂ ಮೂರ್ತಿಂ ಪೂಜಾಯಸ್ವಾನಿಶಂ ಭವಾನ್ ॥**

ದೇಶೇ ದೇಶೇ ತಾಂತ್ರಿಕತ್ವಂ ಪೌರೋಹಿತ್ಯಂಚ ಧಾರ್ಮಿಕವ
ಧರ್ಮಶಾಸ್ತ್ರ ಪ್ರವತ್ರ್ಯತ್ವಂ ಪ್ರಾಯಶ್ಚಿತ್ತ ವಿಧಾನ
ಕಮ್ ॥ (ಲೊ

ಯಾವ ಸ್ಥಳದಲ್ಲಿ ಆನೆ ಸಿಂಹಗಳು ನಿರ್ವೈರವಾಗಿರುವವು ಎಂ
ಶ್ರೀ ಸಾಲಿಗ್ರಾಮ ಕ್ಷೇತ್ರಮಾಹಾತ್ಮ್ಯೆಯಲ್ಲಿ ವರ್ಣಿಸಿರುವುದೋ ಆ
ಸಾಲಿಗ್ರಾಮದಲ್ಲಿ ಮೊದಲು ಸ್ವಪ್ನದಲ್ಲಿ ಮಹಾಗಣಪತಿ ಮುಖಪ
ಮಾಡಬೇಕೆಂದು ಹೇಳಿದಂತೆ, ಲೋಕಾದಿತ್ಯನು ಭಟ್ಟಾಚಾರ್ಯನೊ
ಈ ಕ್ಷೇತ್ರಕ್ಕೆ ಬಂದು ವಿಧ್ಯುಕ್ತವಾಗಿ ಅವರಿಂದಲೇ ಆ ಮುಖಪ
ಮಾಡಿಸಿದನು. ಆಗ ಮಹಾಗಜಾನನನು ಪ್ರತ್ಯಕ್ಷನಾಗಿ ಈ ಕ್ಷೇತ್ರ
ತಾನು ಶಾಶ್ವತವಾಗಿ ನೆಲಸುವೆನೆಂದು ವಚನವಿತ್ತು ಅಂತರ್ಧಾ
ನಾದನು. ಆ ಮೇಲೆ ಭಟ್ಟಾಚಾರ್ಯನು ನಿತ್ಯವೂ ಪೂಜಿಸುತ್ತಿ
ದಶಭುಜ ಗಣಪತಿಯನ್ನು ಕಾರ್ತಟ್ಟು ಗ್ರಾಮದಲ್ಲಿ ಸ್ಥಾಪಿತನಾದ ಅ
ಹೋತ್ರಿಯೂ ತಾಂತ್ರಿಕನೂ ಬ್ರಹ್ಮಜ್ಞಾನ ಸಂಪನ್ನನೂ ಆದ ಬ್ರಹ್ಮ ಕಾರ
ನಿಗೆ ಕೊಟ್ಟು, ವಿಪ್ರಶ್ರೇಷ್ಠನೆ! ನೀನು ಈ ಮಹಾಗಣಪತಿ ಮೂ
ಯನ್ನು ನಿತ್ಯವೂ ಪೂಜಿಸಿಕೊಂಡು ಬರಬೇಕು. ಈ ದೇಶದ
ಅಗ್ರಪೂಜೆಯೂ, ಹದಿನಾರು ಸಂಜ್ಞಕಗಳಾದ ಮಾನಮರ್ಯಾದೆಗಳ
ಸಲ್ಲತಕ್ಕುದು. ದೇಶದೇಶಗಳ ತಾಂತ್ರಿಕತ್ವವು ಮತ್ತು ಪೌರೋಹಿತ್ಯ
ನಿನ್ನ ವೃತ್ತಿಯಾಗಿರಲಿ. ಧರ್ಮಶಾಸ್ತ್ರ ಪ್ರವೃತ್ತಿಯೂ, ಪ್ರಾಯಶ್ಚಿ
ವಿಧಾನವು ನಿನ್ನ ಅಧಿಕಾರವಾಗಿರಲಿ" ಎಂದು ಆಶೀರ್ವದಿಸಿ ಹೊರಟ
ಹೋದನು.

ಅಷ್ಟಗೃಹಕ ಸಂಖ್ಯೇಭ್ಯೋ ಬ್ರಾಹ್ಮಣೇಭ್ಯಃ ಸದಸ್ಯಕಮ್.
ದದೌ ತದಾಯಜ್ಞ ಮಾಧ್ಯೆ ಗುರುಃ ಸರ್ವಪರಿಕ್ಷಕ ॥ (ಲೊ

ಕೂಟಗ್ರಾಮದ ಅಷ್ಟಗೃಹಬ್ರಾಹ್ಮಣರೇ ಸದಾಸಭಿಕರಾಗಿಯ
ಮತ್ತು ಸರ್ವ ಪರೀಕ್ಷಕರಾಗಿಯೂ ಯಜ್ಞಸಮಾರಂಭ ಕಾಲದಲ್ಲಿ ಲೋಕ
ದಿತ್ಯ ರಾಜನು ಸ್ಥಾಪಿಸಿದನು.

ಗ್ರಾಮಾಧಿಕಾರಿಣೌ ಜ್ಞೇಯೌ ಪೂರ್ವಪಶ್ಚಿಮತಸ್ಥಿತೌ ।
ಕಾರ್ಯವದ್ಧೇರಳಾಖ್ಯೌಚ ಪಕ್ಷನಾಥ ದ್ವಯಂ ತದಾ ॥
(ಲೋ)

ಲೋಕಾದಿತ್ಯನು ಈ ಕೂಟ ಮಹಾ ಜಗತ್ತಿನಲ್ಲಿ ಉಭಯಪಕ್ಷಕ್ಕೂ ಧರ್ಮವನ್ನು ನಿರ್ಣಯಿಸುವುದಕ್ಕಾಗಿ ಕಾರ್ಯವಂತ ಮತ್ತು ಹೇರಳೆ ಇವರಿಬ್ಬರನ್ನು ಪಕ್ಷನಾಥದ್ವಯರನ್ನಾಗಿ ನೇಮಿಸಿದನು. ಪೂರ್ವಭಾಗಕ್ಕೆ ಕಾರ್ಯವಂತನು ಪಶ್ಚಿಮಭಾಗಕ್ಕೆ ಹೇರಳೆಯು ಪಕ್ಷನಾಥರಾದರು. ದೇವಸ್ಥಾನದಲ್ಲಿ, ವಿವಾಹ ಮಂದಿರಗಳಲ್ಲಿ ಇವರಿಬ್ಬರ ವಂಶದವರು ಮುಂಡಾಸು ಕಟ್ಟಿಕೊಂಡು ಮರ್ಯಾದೆ ಪಡೆಯುವುದನ್ನು, ಸಲ್ಲಿಸುವುದನ್ನು ನೋಡಬಹುದು.



# 2

## ಪತಿತ ವರ್ಗದವರು

ವರ್ಣಭೇದಗಳು ಭಗವಂತನಿಂದಲೇ ಸೃಷ್ಟಿಸಲ್ಪಟ್ಟಿವೆ. ಶಾಸ್ತ್ರೋಕ್ತ ವಿಧಿವಿಧಾನಗಳನ್ನು ಅನುಸರಿಸುವುದರಿಂದ ಮಾತ್ರವೇ ಬ್ರಾಹ್ಮಣ ವರ್ಣ ದಲ್ಲಿ ಜನ್ಮವು ಮತ್ತು ಬ್ರಾಹ್ಮಣ್ಯವು ಪ್ರಾಪ್ತವಾಗುವುದು. ಮಾನವರಿಗೆ ತಮಗೆ ಇಷ್ಟವಿದ್ದಂತೆ ಬ್ರಾಹ್ಮಣ್ಯವನ್ನು ಪಡೆಯಲು ಅಥವಾ ಅನ್ಯರಿಗೆ ಕೊಡಲು ಬರುವುದಿಲ್ಲ. ಪರಶುರಾಮಾದಿ ಅವತಾರ ಪುರುಷರ ವಿಚಾರ ಬೇರೆ.

ತಿಳಿದಾಗಲಿ ಅಥವಾ ಅನ್ಯಕಾರಣದಿಂದಾಗಲಿ ಪತಿತರೊಡನೆ ಸಂಬಂಧ ಮತ್ತು ಸಂಸರ್ಗವನ್ನು ಬೆಳೆಯಿಸುವುದರಿಂದ ಬ್ರಾಹ್ಮಣ್ಯಕ್ಕೆ ಪಾತಿತ್ಯವು ಪ್ರಾಪ್ತವಾಗುತ್ತದೆ. ನಮ್ಮ ಸುತ್ತಲೂ ಹಲವಾರು ತಂಡ ದವರು ಬ್ರಾಹ್ಮಣರಲ್ಲದಿದ್ದರೂ ತಾವು ಬ್ರಾಹ್ಮಣರೆಂದಾಗಲಿ, ಪತಿತ ಬ್ರಾಹ್ಮಣರು ತಾವು ಮೇಲ್ತರಗತಿಯವರೆಂದಾಗಲಿ ವಾದಿಸುವ ಈ ಕಾಲದಲ್ಲಿ ಇದರ ಸತ್ಯಸ್ಥಿತಿಯೇನೆಂದು ವಿಚಾರಿಸುವುದು ನಮ್ಮ ಬ್ರಾಹ್ಮಣ್ಯ ವನ್ನು ಕಾಪಾಡಿಕೊಳ್ಳಲು ಅತ್ಯಗತ್ಯವು. ಶ್ರೇಷ್ಠತೆ ಅಥವಾ ಪಾತಿತ್ಯ ವಿಚಾರದಲ್ಲಿ ಶಾಸ್ತ್ರಗಳು, ಮತ್ತು ಸಂಪ್ರದಾಯಗಳೇ ಆಧಾರವಲ್ಲದೆ ಇತರರು ವಿಚಾರವಿಲ್ಲದೆ ಅಥವಾ ಸ್ವಾರ್ಥ ಬುದ್ಧಿಯಿಂದ ಸಮಾನ ವರ್ಗ ದವರಾಗಿ ನೋಡಿರುವುದು ಅಥವಾ ಪಾತಿತ್ಯರ ಸಂಸರ್ಗ ಮಾಡಿರುವುದು ಆಧಾರವಾಗಲಾರದು.

ನಮ್ಮ ಜಿಲ್ಲೆಯಲ್ಲಿ ನೆಲಸಿರುವ ಅನೇಕ ಪತಿತ ಬ್ರಾಹ್ಮಣ ವರ್ಗ ದವರ ವಿಚಾರವು ಸಹ್ಯಾದ್ರಿ ಉತ್ತರ ಖಂಡದಲ್ಲಿ ನಿರೂಪಿತವಾಗಿದೆ. ಅದರ ಮುಖ್ಯಾಂಶವನ್ನು ನಮ್ಮವರ ಅವಘಾಹನೆಗಾಗಿ ಇಲ್ಲಿ ಸಂಗ್ರಹಿಸಿದೆ. ಇವೆಲ್ಲಾ ಪುರಾತನ ಕಥೆ; ಇವನ್ನು ಕಟ್ಟಿಕೊಂಡು ನಮಗೆ ಈಗ ಏನು ಪ್ರಯೋಜನ? ಒಂದು ಕಾಲ ಪಾತಿತ್ಯ ಹೊಂದಿದವರು ಮೇಲಕ್ಕೆ ಬರ ಬೇಡವೆ? ಎಂದು ಕೆಲವರು ವಾದಿಸದಿರರು. ಆದರೆ ಬ್ರಾಹ್ಮಣ್ಯ

ಕೆಲವರ ಇಷ್ಟದಂತೆ ಪಡೆಯಲು ಅಥವಾ ಅನ್ಯರಿಗೆ ಕೊಡಲು ಬರುವ ವಸ್ತುವಲ್ಲವೆಂದು ಯಾರೂ ಅಲ್ಲಗಳೆಯಲಾರರು. ಬ್ರಾಹ್ಮಣ್ಯವನ್ನು ಪ್ರತಿಯೊಬ್ಬನು ತನ್ನ ಇಷ್ಟಬಂದ ವಿಚಾರದಂತೆ ನಿರ್ಧರಿಸುವಂತಿರಬೇಕೆಂದರೆ ಬ್ರಾಹ್ಮಣ್ಯವು ಅಶಾಸ್ತ್ರೀಯ ಅವ್ಯವಸ್ಥಿತ ಅವಸ್ಥೆಯಾಗುವುದರಲ್ಲಿ ಸಂಶಯವಿಲ್ಲ. ವರ್ಣಾಶ್ರಮದಲ್ಲಿ ಶ್ರದ್ಧೆ ವಿಶ್ವಾಸವುಳ್ಳವರಿಗೆ ಶಾಸ್ತ್ರವನ್ನು ಅನುಸರಿಸುವ ಕರ್ತವ್ಯವಲ್ಲದೆ ಅದನ್ನು ಬೇಕಾದಂತೆ ತಿದ್ದುವ ಅಥವಾ ಬದಲಾಯಿಸುವ ಅಧಿಕಾರವಿಲ್ಲವೆಂಬುದನ್ನು ಪ್ರತಿಯೊಬ್ಬ ಸನಾತನ ಧರ್ಮಾಭಿಮಾನಿಯೂ ನೆನಪಿನಲ್ಲಿಡಬೇಕಾಗುತ್ತದೆ.

ಸಹ್ಯಾದ್ರಿಯ ಉತ್ತರಖಂಡದ ಹತ್ತನೆ ಅಧ್ಯಾಯದಿಂದ ಇಪ್ಪತ್ತ ಮೂರನೆ ಅಧ್ಯಾಯದವರೆಗೆ ಪಾತಿತ್ಯಗ್ರಾಮಗಳ ಇತಿಹಾಸವನ್ನು ನಿರೂಪಿಸಿದೆ. ಅವುಗಳಲ್ಲಿ ಇಪ್ಪತ್ತು ಮತ್ತು ಇಪ್ಪತ್ತೊಂದನೆಯ ಅಧ್ಯಾಯಗಳಲ್ಲಿ ಹೇಳಿದ ಬೆಳಂಜೆ ಗ್ರಾಮದ ಪಾತಿತ್ಯ, ಮತ್ತೊಂದು ಕಿರಾತಕನ್ಯೆಯ ಸಂಸರ್ಗದಿಂದ ಸಂಭವಿಸಿದ ಪಾತಿತ್ಯ, ಈ ವಿಚಾರಗಳನ್ನು ಸ್ಥಳಾಭಾವದಿಂದ ಇಲ್ಲಿ ಸಂಗ್ರಹಿಸಿರುವುದಿಲ್ಲ. ಅನಂತರ ಚಿತ್ತಪಾವನ ಮತ್ತು ಕಾರಾಷ್ಟ್ರ ಪಾದ್ಯರ ವಿಚಾರವಿದೆ.

**ಪಂಚಗ್ರಾಮದವರು:** ಕ್ರೋಡ ಎಂಬ ಮಹಾಮುನೀಶ್ವರರು ಬಹುಕಾಲ ತಪಸ್ಸನ್ನಾಚರಿಸಿದ ಕುಂದಾಪುರ ತಾಲೋಕಿನಲ್ಲಿರುವ ಒಂದು ಕ್ಷೇತ್ರವು 'ಕ್ರೋಡಾದ್ರಿ' ಎಂದು ವಿಖ್ಯಾತಿಗೊಂಡಿದೆ. ಇದು ಈಗ ಶಂಕರನಾರಾಯಣ ಕ್ಷೇತ್ರವೆಂದು ಕರೆಯಲ್ಪಡುತ್ತದೆ. ಪರಶುರಾಮನು ಈ ಕ್ಷೇತ್ರಕ್ಕೆ ಬಂದು ಶ್ರೀ ಶಂಕರನಾರಾಯಣ ದೇವರನ್ನು ಸ್ತುತಿಸಿ, ಪಶ್ಚಿಮಾಭಿಮುಖವಾಗಿ ಹೊರಟನು. ಸಮೀಪದಲ್ಲಿಯೇ ಗಂಗಾನದಿಗೆ ಸಮಾನ ಮತ್ತು ಪಾಪನಾಶಿನಿಯಾದ ಶುಕ್ತಿಮತೀ ಎಂಬ ನದಿಯನ್ನು ನೋಡಿ ಹರ್ಷಿತನಾದನು. ಸ್ನಾನ ಮತ್ತು ನಿತ್ಯಕರ್ಮಗಳನ್ನು ಸಾಂಗವಾಗಿ ನೆರವೇರಿಸಿ ಸೋಽಹಂಭಾವದಿಂದ ಧ್ಯಾನಸ್ಥನಾದನು.

ತಾಂ ದದರ್ಶ ಮಹಾಭಾಗಸ್ತಸ್ಯಾಂಸ್ನಾತುಂ ಪ್ರಚಕ್ರಮೆ ।
ವಿಧಾಯ ನಿತ್ಯಕರ್ಮಾಣಿ ಸೋಹಂ ಭಾವೇನ ಭಾವಯೇತ್
(ಸ. ೧೦-೨೪)

ಆ ಸಮಯಕ್ಕೆ ಅಲ್ಲಿಗೆ ಒಂಭತ್ತು ಜನ ಗರ್ಭಿಣಿಯರಾದ ಬ್ರಾಹ್ಮ ವಿಧವೆಯರು ಹಸಿವೆ ಬಾಯಾರಿಕೆಗಳಿಂದ ಕಂಗೆಟ್ಟು ಬಂದರು. ಮು ಪುಂಗವರನ್ನು ನೋಡಿ, ಅವರ ಪಾದಾರವಿಂದಗಳಿಗೆ ಎರಗಿ ಈ ಪ್ರಕಾ ಮೊರೆಯಿಟ್ಟರು. "ಮುನಿಪೂಜ್ಯರೆ! ನಾವು ಮೂವತ್ತೆರಡು ಗ್ರಾಮಗಳ ನೆಲಸಿದ್ದೆವು. ಬಾಲ್ಯದಲ್ಲಿ ಪತಿವಿಹೀನರಾಗಿ ಗರ್ಭಿಣಿಯರಾದ ಕಾರಣ ಜನರಿಂದ ದೂಷಿತರಾಗಿದ್ದೇವೆ. ಗ್ರಾಮಣಿ ಮತ್ತು ತಪಸ್ವಿಗಳಿಂ ಬಹಿಷ್ಕೃತರಾಗಿರುವೆವು. ದೇಹತ್ಯಾಗ ಮಾಡಬೇಕೆಂದು ಇಲ್ಲಿಗೆ ಬಂದೆವು ನಮ್ಮ ಪೂರ್ವಾರ್ಜಿತ ಪುಣ್ಯಲೇಶದಿಂದ ತಮ್ಮ ದಿವ್ಯ ದರ್ಶನವು ಲಭಿಸಿತು ಆದ್ದರಿಂದ ಹೇ ಕೃಪಾನಿಧಿ! ನಮ್ಮನ್ನು ಉದ್ಧಾರಮಾಡಬೇಕು"! ಎಂದರು ಪರಶುರಾಮನು ಅವರಿಗೆ ಅಭಯವನ್ನಿತ್ತು ತೀರ್ಥಯಾತ್ರೆಗೆ ಹೋದನು ಕೆಲವು ದಿವಸಗಳಲ್ಲಿ ಆ ಒಂಭತ್ತು ಸ್ತ್ರೀಯರು ಒಂಭತ್ತು ಗಂಡು ಮಕ್ಕ ಳನ್ನು ಹಡೆದರು. ಪರಶುರಾಮನು ತಿರುಗಿ ಬಂದಾಗ, ಅವರು ತಮ್ಮ ಕಷ್ಟಗಳನ್ನು ತಿರುಗಿ ವಿಜ್ಞಾಪಿಸಿಕೊಂಡರು. ಪರಶುರಾಮನು ಶಿಷ್ಯನಾದ ಅಗ್ನೀಧ್ರವನನ್ನು ಕರೆದು ಅವರಿಗೆ ವೇದರಹಿತವಾಗಿ ನಾಮಕರಣಾದಿ ಸಂಸ್ಕಾರಗಳನ್ನು ಮಾಡೆಂದು ಆಜ್ಞಾಪಿಸಿ ಮಹೇಂದ್ರ ಪರ್ವತಕ್ಕೆ ಹೊರಟುಹೋದನು.

ಗುರುವಿನ ಅಪ್ಪಣೆಯಂತೆ ಅಗ್ನೀಧ್ರವನು ಆ ವಿಧವಾಪುತ್ರರನ್ನು (ಗೋಲಕರನ್ನು) ಕರೆದು ಸ್ನಾನಮಾಡಿಸಿ, ಅವರಿಗೆ ಅಮಂತ್ರಿಕ ಸಂಸ್ಕಾರ ಮಾಡಿ, ಮಾಪಳ, ಕನ್ನಂತ, ವೈದ್ಯ, ಕೇಯರ್, ಚಾತರ, ಹೆಬ್ಬಾರ, ಮಡಿ ಯಾಳ, ಹೇಮಣ ಮತ್ತು ಕೊಡಗಿ ಎಂಬ ಒಂಭತ್ತು ಹೆಸರುಗಳನ್ನು ಇಟ್ಟು ಒಂಭತ್ತು ಜಾತಿಯವರಾಗಿ ವಿಭಾಗಿಸಿದನು. ಅವರ ನಿವಾಸ ಕ್ಕಾಗಿ ಕುಶಸ್ಥ, ಪಾಮಸಾಳ, ಉಳುಗ್ರಾಮ, ಕಾರವೇಲ ಮತ್ತು ಪರಾವಾಟು ಎಂಬ ಪಂಚಗ್ರಾಮಗಳನ್ನು ನಿರ್ಮಿಸಿ, ಒಂದು ಗ್ರಾಮ ದಲ್ಲಿ ಒಬ್ಬನನ್ನು, ಉಳಿದ ನಾಲ್ಕು ಗ್ರಾಮಗಳಲ್ಲಿ ಇಬ್ಬರಂತೆ ಅಗ್ನೀಧ್ರವನು ಅವರನ್ನು ಸ್ಥಾಪಿಸಿದನು. ಇವು ಹಳ್ಳಿಹೊಳೆ, ಅಜ್ರಿ, ಹೊಸಂಗಡಿ, ಉಳ್ಳೂರು ಮತ್ತು ಸಿದ್ಧಾಪುರ ಎಂಬ ಹೆಸರಿನಿಂದ ಈಗ ಕರೆಯಲ್ಪಡು ತ್ತವೆ. ಅವರು ಪಾತಿತ್ಯರಾದ ಪಂಚಗ್ರಾಮದವರೆಂದು ಕರೆಯಲ್ಪ

ಟ್ಟರು. ಅವರೊಡನೆ ಸಹಭೋಜನ ಕನ್ಯಾ ಸಂಬಂಧಾದಿಗಳು ಸಹ್ಯಾದ್ರಿಯಲ್ಲಿ ನಿಷೇಧಿಸಲ್ಪಟ್ಟಿವೆ.

**ತೇಷಾಮನ್ನಂ ಪ್ರಭುಂಜಾನಃ ಪಾತಿತ್ಯಮನು ಗಚ್ಛತಿ ॥**

(ಸ. ೧೧-೪೩)

**ಮೋದ ಗ್ರಾಮದವರು:** ಪೂರ್ವದಲ್ಲಿ ಶುಕ್ತಿಮತೀ ನದಿಯ ದಕ್ಷಿಣ ಭಾಗದಲ್ಲಿ ಮೋದ ಎಂಬಲ್ಲಿ ಮುದ್ದ ಮತ್ತು ಕುಂದ ಎಂಬ ಇಬ್ಬರು ಶೂದ್ರಪರಾಕ್ರಮಿಗಳಿದ್ದರು. ಇವರ ಮಹಿಮೆ ಮತ್ತು ಔದಾರ್ಯವನ್ನು ಕೇಳಿ ಎಂಟು ಬ್ರಾಹ್ಮಣರು ಪತ್ನಿಪುತ್ರರ ಸಮೇತ ಬಂದು ತಮ್ಮ ದಾರಿದ್ರ್ಯವನ್ನು ಪರಿಹರಿಸಿಕೊಡಬೇಕೆಂದು ಇವರನ್ನು ಬೇಡಿಕೊಂಡರು. ಧಾರ್ಮಿಕನೂ ಹಿರಿಯನೂ ಆದ ಮುದ್ದ ಆ ಎಂಟು ಬ್ರಾಹ್ಮಣರಿಗೆ ಮನೆಗಳನ್ನು ಕಟ್ಟಿಸಿ, ಸಕಲ ಸಂಭಾರಗಳನ್ನು ದ್ರವ್ಯವಸ್ತ್ರಾದಿಗಳನ್ನು ಧನ-ದಾಸಿಜನರನ್ನು ಕೊಟ್ಟನು. ಈ ಪ್ರಕಾರ ಅವರು ಹನ್ನೆರಡು ವರ್ಷಕಾಲ ಶೂದ್ರಾಶ್ರಯದಲ್ಲಿ ಕಾಲಕಳೆದರು.

ವಂಶೋನ್ನತಿಗಾಗಿ ಪುತ್ರಹೀನನಾದ ಮುದ್ದನು ಎರಡನೆ ವಿವಾಹ ವನ್ನು ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದನು. ಅರ್ಧಯೋಜನ ದೂರ ದಲ್ಲಿದ್ದ ಸ್ತ್ರೀಯ ವಿವಾಹಕ್ಕೆ ಸಂಭ್ರಮದ ದಿಬ್ಬಣವು ಸಿದ್ಧವಾಯಿತು. ಆದರೆ ಮದುಮಗ ಮುದ್ದ ಏರುವ ಪಲ್ಲಕಿಯನ್ನು ಹೊರುವವರು ಇರಲಿಲ್ಲ. ಮುದ್ದ ಆ ಎಂಟು ಬ್ರಾಹ್ಮಣರನ್ನು ಕರೆದು ತನ್ನ ಪಲ್ಲಕಿಯನ್ನು ಹೊರಬೇಕೆಂದು ಹೇಳಿದನು.

**ಸ್ವಕುಲಾಚಾರಮುತ್ಸೃಜ್ಯ ನಾನಾರತ್ನೈರಲಂಕೃತಾಃ ।**

(ಸ. ೧೨-೨೫)

**ಅಷ್ಟಪಾದೇನರಚಿತಾಮುಷ್ಟ್ರೌತೆ ಶಿಬಿಕಾಂದಧುಃ** (ಸ. ೧೨-೨೬)

ತಮ್ಮ ಕುಲಾಚಾರವನ್ನು ತ್ಯಜಿಸಿ ಅವರು ಒಪ್ಪಿ ಪಲ್ಲಕಿಯನ್ನು ಹೊತ್ತರು. ವಿವಾಹವು ಸಾಂಗವಾಗಿ ನೆರವೇರಿತು. ಮನೆಗೆ ಹಿಂತಿರುಗಿ ಬಂದ ಮೇಲೆ ಆ ಎಂಟು ಜನ ಬ್ರಾಹ್ಮಣರಿಗೆ ಮುದ್ದ ವಿಪುಲ ಧನವನ್ನು ಕೊಟ್ಟನು.

ಕೆಲವು ಕಾಲದ ಮೇಲೆ ಮುದ್ದ ವೈರಾಗ್ಯವನ್ನು ಹೊಂದಿ ತೀ
ಯಾತ್ರೆಗೆ ಹೊರಡಬೇಕೆಂದು ಸಂಕಲ್ಪಿಸಿ, ತನ್ನ ಸರ್ವಸ್ವವನ್ನೂ ಮ
ಗ್ರಾಮವನ್ನೂ ಆ ಎಂಟು ಬ್ರಾಹ್ಮಣರಿಗೆ ಕೊಟ್ಟು ಯಾತ್ರಿಕನಾದ
ಇವರಲ್ಲಿ ಕಾಲಕ್ರಮದಲ್ಲಿ ಹೆಬ್ಬಾರ, ಐತಾಳ, ಗೀಹಾಲ ಎ
ಒಂಭತ್ತು ಭೇದಗಳು ಆದುವು.

ಹೆಬ್ಬಾರೈತಾಳ ಗೀಹಾಲಂ ಮೋದಗ್ರಾಮೆ ನವಸ್ಮೃತಾ ।
ಏತೇಷಾಂ ದರ್ಶನಾತ್ಸದ್ಯಃ ಪಾತಿತ್ಯಮನುಗಚ್ಛತಿ

(ಸ. ೧೨-೫

ಅವರು ಶೂದ್ರಾನ್ನದಿಂದ ಜೀವಿಸಿರುವ ಕಾರಣದಿಂದಲೂ ಶೂದ್ರ
ಪಲ್ಲಕಿಯನ್ನು ಹೊತ್ತದ್ದರಿಂದಲೂ ಕೂಟಮಹಾಜಗತ್ತಿನ ಸಿರ್ಧಾರದ
ಇವರಿಗೆ ಶ್ರೀ ಗುರು ನೃಸಿಂಹದೇವಸ್ಥಾನದೊಳಗೆ ಪ್ರವೇಶವಿಲ್ಲದಾಯಿತ
ಅವರು ಜೋಗಿಅಂಬಾಗಲ ಹೊರಗೆ ನಿಲ್ಲಬೇಕಾಗಿತ್ತು.

**ಕುಂದುವರಗ್ರಾಮ ಪಾತಿತ್ಯವಿಚಾರ:** ಮುದ್ದ ಬ್ರಾಹ್ಮಣರಿ
ವಿಪುಲ ಸಂಪತ್ತನ್ನು ಕೊಟ್ಟ ವಿಚಾರವನ್ನು ಕೇಳಿ ಶಿವಳ್ಳಿ ಗ್ರಾಮದ ಬೆ
ಹತ್ತು ಬ್ರಾಹ್ಮಣರೂ ಕುಂದನನ್ನು ಆಶ್ರಯಿಸಿದರು. ಶಿವಸಾಯುಜ್ಯ
ಕಾರಣವಾದ ವೃಷೋತ್ಸರ್ಗ ಎಂಬ ಕರ್ಮವಿಪಾಕವನ್ನು ಈ ಹತ
ಬ್ರಾಹ್ಮಣರು ಸೇರಿ, ಆ ಕುಂದನ ಮನೆಯಲ್ಲಿ ಮಾಡಿದರು. ಕುಂದನ
ಉದಾರ ಮನಸ್ಸಿನಿಂದ ಈ ಕರ್ಮವಿಪಾಕಕ್ಕೆ ಯೋಗ್ಯವಾದ ದಾನಗಳನ
ಕೊಟ್ಟನು. ಹತ್ತು ಬ್ರಾಹ್ಮಣರಿಗೆ ಹತ್ತು ಮನೆಗಳನ್ನು, ಕುಂಡಲಗಳನ
ಗೃಹಕೃತ್ಯದ ಸಕಲ ಸಾಮಗ್ರಿಗಳನ್ನು ವಸ್ತ್ರಾಭರಣಗಳನ್ನು ದಾನಕೊಟ್ಟನು
ಇವರು ನೆಲಸಿದ ಗ್ರಾಮದ ಹೆಸರು ಕುಂದುವರಗ್ರಾಮ. ಇವರು
ಪಾತಿತ್ಯರೆಂದು ತಿರಸ್ಕೃತರಾದರು. (ಈ ವಿಚಾರವು ಸಹ್ಯಾದ್ರಿ ಹದಿಮೂರ
ಅಧ್ಯಾಯದಲ್ಲಿದೆ).

**ಕೋಟಿಲಿಂಗೇಶ ಬಳಿಯ ಪಾತಿತ್ಯಗ್ರಾಮ:**—ಪೂರ್ವದ
ಪಸುಮತಿ ಎಂಬ ರಾಜನಿದ್ದನು. ಒಂದು ಸಮಯ ಕೂಟಸ್ಥರಿಗ
ಕೋಟಿಲಿಂಗದ ಬಳಿ ನೆಲೆಸಿದ್ದ ಕೋಟೇಶ್ವರಸ್ಥರಿಗೂ ಒಂದು ಭೂಸಂಬಂ

ವಾದವು ಹುಟ್ಟಿತು. ಈ ಭೂಮಿಯು ತಮ್ಮದೆಂದು ಎರಡು ಕಡೆಯು ರೂ ರಾಜನಲ್ಲಿ ವಿಜ್ಞಾಪಿಸಿಕೊಂಡರು. ಮಹಾಪ್ರಾಜ್ಞನೂ ನೀತಿಕುಶ ನೂ ಆದ ವಸುರಾಜನು ಎಷ್ಟು ನೀತಿ ಸಮಾಧಾನವನ್ನು ಹೇಳಿದರೂ ಯೋಜನವಾಗಲಿಲ್ಲ. ಆದ್ದರಿಂದ ರಾಜನು "ನಾನು ಈ ಭೂಮಿಯನ್ನೇ ಪ್ರಾರ್ಥಿಸುತ್ತೇನೆ. ಅಸತ್ಯವಾದಿಗಳು ದಹಿಸಲ್ಪಡುವರು" ಎಂದನು. ಮೇಲೆ ಮೂವತ್ತೆರಡು ಗ್ರಾಮದಲ್ಲಿರುವ ಧರ್ಮನಿರತರಾದ ಶ್ರೇಷ್ಠ ನ್ನು ಆಹ್ವಾನಿಸುವುದಕ್ಕಾಗಿ ರಾಜದೂತರು ಕಳುಹಿಸಲ್ಪಟ್ಟರು.

ನಿಶ್ಚಿತ ದಿನದ ಮೊದಲಿನರಾತ್ರಿ ಕೋಟೇಶ್ವರಸ್ಥರು ವಿವಾದ ಸ್ಥಳಕ್ಕೆ ಂದು ಒಂದು ಆಳವಾದ ಹೊಂಡವನ್ನು ತೆಗೆದು, ಅದರಲ್ಲಿ ತಮ್ಮ ಒಬ್ಬ ಮನುಷ್ಯನನ್ನು ಕುಳ್ಳಿರಿಸಿ ಮಣ್ಣನ್ನು ಮುಚ್ಚಿಹೊರಟುಹೋದರು.

ರಾಜನು ಮಂತ್ರಿ ಪ್ರಮುಖರಿಂದಲೂ, ಮಹಾ ಜನಗಳಿಂದಲೂ ಕೂಡಿದವನಾಗಿ ಕೂಟ ಗ್ರಾಮದ ಉತ್ತರದ ಗಡಿಯಾದ ಮಣೂರಿಗೂ ಕ್ಕಟ್ಟಿಗೂ ನಡುವೆ ಇರುವ ವಿವಾದ ಸ್ಥಳಕ್ಕೆ ಬಂದನು. ರಾಜನು ಸ್ನಾನಮಾಡಿ ಶುಚಿರ್ಭೂತನಾಗಿ, ಗಂಧ ಪುಷ್ಪಾಕ್ಷತೆಗಳಿಂದ ಭೂಮಿ ಯನ್ನು ಪೂಜಿಸಿ, ಭಕ್ಷಭೋಜ್ಯಾದಿ ನೈವೇದ್ಯಗಳನ್ನು ಅರ್ಪಿಸಿ, ಅಂಜಲಿ ಬದ್ಧನಾಗಿ ಈ ಪ್ರಕಾರ ನಿವೇದಿಸಿದನು. "ಹೇ ಭೂದೇವಿ! ಕೋಟೇಶ್ವರ ಸ್ಥರು ಈ ವಿವಾದ ಸ್ಥಳವು ತಮ್ಮದೆಂತ ಸಾಧಿಸುತ್ತಾರೆ. ಕೂಟಸ್ಥರು ತಮ್ಮದೆಂದು ವಾದಿಸುತ್ತಾರೆ. ನೀನು ಇದರ ಸತ್ಯವನ್ನು ತಿಳಿದಿರುವಿ. ಆದಕಾರಣ ಭೂದೇವಿ! ಸತ್ಯವನ್ನು ಪ್ರಕಟಿಸುವವಳಾಗು." ಆಗ ಹೊಂಡದಲ್ಲಿ ಅಡಗಿರುವ ಬ್ರಾಹ್ಮಣನು, "ರಾಜನೆ! ಈ ವಿವಾದಾಸ್ಪದವಾದ ಭೂಮಿಯು ಕೋಟೇಶ್ವರಸ್ಥರದ್ದೇ ಆಗಿದೆ. ಇದರಲ್ಲಿ ಸಂಶಯವಿಲ್ಲ" ಎಂದನು.

ಆ ಮೇಲೆ ಕೋಟೇಶ್ವರಸ್ಥರು, "ಭೂದೇವಿ ಸತ್ಯವನ್ನೇ ನುಡಿದಳು" ಎಂದು ಆರ್ಭಟಿಸಿದರು. ಆಗ ಎಲ್ಲವರಿಗೂ ಆಶ್ಚರ್ಯವಾಗುವಂತೆ ಆಕಾಶವಾಣಿಯು ಕೇಳಿಸಿತು. "ಈಗ ಆಡಿದ ಮಾತು ಭೂದೇವಿಯ ನುಡಿಗಳಲ್ಲವು. ಹೊಂಡದಲ್ಲಿ ಅಡಗಿರುವ ಮನುಷ್ಯನಾಡಿದ ಮಾತಾಗಿದೆ.

ಕೋಟೀಶ್ವರಸ್ಥರು ಅಸತ್ಯವಾದಿಗಳೂ, ವಂಚಕರೂ ಆಗಿರುವರ
ಶಿವಪಾದದಲ್ಲಿ ಪ್ರತಿಜ್ಞೆಮಾಡುತ್ತೇನೆ." ಎಂಬ ಈ ವಾಣಿಯನ್ನು
ಎಲ್ಲರಿಗೂ ರೋಮಾಂಚವಾಯಿತು. ರಾಜನ ಪರಿಮುಖ ಎಲ್ಲ
ಭೂಮಿಯನ್ನು ಶೋಧಿಸಿದರು. ಅಗೆದು ನೋಡುವಾಗ್ಗೆ ಕ್ರಿಮಿಗಳ
ತಿನ್ನಲ್ಪಡುತಿದ್ದ ಆ ಮನುಷ್ಯನು ಸಿಕ್ಕಿದನು. ರಾಜನು ಕೋಟೀಶ್ವರಸ್ಥ
ಗ್ರಾಮದಿಂದ ಹೊರಪಡಿಸಬೇಕೆಂದು ಆಜ್ಞಾಪಿಸಿ ರಾಜಗೃಹವ
ಸೇರಿದನು.

ನೆರೆದ ಬ್ರಾಹ್ಮಣರು ಕೋಟೀಶ್ವರದವರನ್ನು ಶಪಿಸಿ ಸಕಲ ಕ
ಗಳಿಂದ ಬಹಿಷ್ಕರಿಸಿದರು. ಇವರು ರಾಜಾಜ್ಞೆಯಿಂದ ಹೊರಡಿಸಲ್ಪ
ರಾಗಿ ಸಮುದ್ರ ತೀರವನ್ನು ಸೇರಿ ನೆಲಸಿದರು. ಇದನ್ನು

"ಪಾತಿತ್ಸ ಗ್ರಾಮುಸ್ತನ್ಯಕ್ಕೋಟಿ ಲಿಂಗೇಶ ಸನ್ನಿದಾ"

(ಸ. ೧೫

ಎಂದು ಮುಂತಾಗಿ ವಿವರಿಸಲ್ಪಟ್ಟಿದೆ.

**ಸಕತ್ರಪುರ ಪಾತಿತ್ಯ:** ಅಂಗ, ವಂಗ, ಕಳಿಂಗ, ಸೌರಾ
ಗುರ್ಜರ, ಆಂಧ್ರ, ದ್ರಾವಿಡ ಮೊದಲಾದ ಅನೇಕ ದೇಶಗಳಿಂದ ಬಹಿಷ್ಕ
ರಾದ ನೂರು ವಿಧವೆಯರ ಒಂದು ಗುಂಪು ತುಂಗಭದ್ರಾ ನದಿಯ ಬ
ಬಂದು ಸೇರಿತು. ಇವರೆಲ್ಲರೂ ಗರ್ಭಿಣಿಯರಾದ ಕಾರಣ ಘಟಶ್ರಾದ್ಧ
ವಿಧಾನದಿಂದ ಬಹಿಷ್ಕೃತರಾಗಿದ್ದರು. ಇವರು ಸೇರಿ ವಿರೂಪಾಕ್ಷ ದೇವರ
ಪ್ರಾರ್ಥಿಸಿ, ಆ ಕ್ಷೇತ್ರದಲ್ಲಿದ್ದ ಯೋಗಿಗಳಲ್ಲಿ ಶ್ರೇಷ್ಠರಾದ ಕಣ್ವಮುನಿ
ಶರಣಾಗತರಾದರು. ಕಣ್ವಮುನಿಗಳು ಇವರ ಮಾತನ್ನು ಕೇಳಿ ಹೀಗೆಂದ
"ಕ್ರೋಡಪರ್ವತದ ತಪ್ಪಲಿನಲ್ಲಿ ಶಂಕರನಾರಾಯಣ ಕ್ಷೇತ್ರವಿ
ಅಲ್ಲಿಯೇ ಸಮೀಪದಲ್ಲಿ ಹರಿಯುವ ವಾರಾಹೀ ನದಿಯ ತಟದಲ್ಲಿ ಮ
ಭಾಗ್ಯನಾದ ಪರಶುರಾಮನು ತಪಸ್ಸನ್ನಾಚರಿಸುತ್ತಿದ್ದಾನೆ. ಪತಿತರ
ಉದ್ಧರಿಸಲು ಈ ಭೃಗುಕುಮಾರನೊಬ್ಬನೇ ಸಮರ್ಥನು. ಆದ್ದರಿ
ನೀವು ಅವನ ದರ್ಶನ ಮಾಡಿ ನಿಮ್ಮ ಇಷ್ಟಾರ್ಥಗಳನ್ನು ಪಡೆಯಿರಿ"

ಆ ವಿಧವೆಯರು ಕಣ್ವನ ಹಿತೋಕ್ತಿಯಂತೆ ವಾರಾಹೀ ನದಿಯ
ಸೇರಿ, ಪರಶುರಾಮನನ್ನು ವಂದಿಸಿ, ತಮ್ಮನ್ನು ಕಾಪಾಡಬೇಕೆಂದು ವ

ಟ್ಟರು. ಕೃಪಾನಿಧಿಯಾದ ಭೃಗುನಂದನನು, "ವಿಧವಾ ಸ್ತ್ರೀಯರೇ!
ಂದ ಆರು ಯೋಜನ ದೂರದಲ್ಲಿ ಗೋಕರ್ಣೇಶ್ವರನ ಸನ್ನಿಧಿಯಲ್ಲಿ
ಡು ಯೋಜನ ವಿಸ್ತಾರ ಪಸರಿಸಿರುವ ಒಂದು ಆಲದಮರವಿದೆ. ನೀವು
ಾಗುತಿ ಮತ್ತು ಕಾಲುಂಗುರಗಳನ್ನು ತ್ಯಜಿಸಿ ಅದರಾಶ್ರಯದಲ್ಲಿ
ರ್ೀತರಾಗಿ ನನ್ನ ಆಜ್ಞೆಯಂತೆ ಬಾಳಿರಿ. ಧನುರಾಕಾರದ ಒಂದು
ಹ್ನೆಯನ್ನು ಕೊಡುತ್ತೇನೆ. ಅದನ್ನು ಧರಿಸುವುದರಿಂದ ನಿಮಗೆ ಶ್ರೇಯಸ್ಸು
ರೆಯುವುದು" ಎಂಬ ಅಭಯವನ್ನಿತ್ತು ಅಂತರ್ಧಾನನಾದನು.

ಆ ವಿಧವೆಯರ ತಂಡವು ಆ ಪ್ರದೇಶವನ್ನು ಸೇರಿ, ಅಲ್ಲಿಯ
ಾಮಣಿಗಳ ಅನುಮತಿಯನ್ನು ಪಡೆದು ಒಂದು ಪ್ರತ್ಯೇಕ ಸ್ಥಾನವನ್ನು
ಪಿಸಿಕೊಂಡು ನೆಲಸಿದರು. ಇವರ ಸಂಸರ್ಗದಿಂದ ಪಾತಿತ್ಯವು ಲಭಿ
ತ್ತದೆಂದು ಸಹ್ಯಾದ್ರಿಯಲ್ಲಿ ಹೇಳಿದೆ.

**ತೇಷಾಂ ಸಂಸರ್ಗ ಮಾತ್ರೇಣ ಪಾತಿತ್ಯಮನುಗಚ್ಛತಿ**

(ಸ. ೧೫-೬೩)

ಈ ಸಕಲ ಪುರದವರು ಉತ್ತರ ಕನ್ನಡ ಜಿಲ್ಲೆಯ ಭಟ್ಕಳ, ನಮ್ಮ
ಲ್ಲೆಯ ಕುಂದಾಪುರ ತಾಲೂಕಿನ ಆನಗಳ್ಳಿ, ಬಡಾಕೆರೆ, ನಾಡು, ಹಡವು,
ರವಂತೆ ಮೊದಲಾದ ಗ್ರಾಮಗಳಲ್ಲಿ ನೆಲಸಿರುವರು. ಇವರೊಡನೆ
ಹಭೋಜನವಾಗಲಿ, ಕನ್ಯಾಸಂಬಂಧವಾಗಲಿ ಇವರಲ್ಲಿ ಊಟವಾಗಲಿ
ಹ್ಯಾದ್ರಿಯಲ್ಲಿ ನಿಷೇಧವಾಗಿವೆ.

**ಪರಶುರಾಮಶಪಿತಭ್ರಷ್ಟರು:** ಮಯೂರವರ್ಮ ರಾಜನು
ಹಿಚ್ಛತ್ರದಿಂದ ಕರತಂದ ಬ್ರಾಹ್ಮಣರಿಗೆ ಗ್ರಾಮಗಳನ್ನು ವಿಭಾಗಿಸಿ
ೊಡುತ್ತಿರುವಾಗ, ಪರಶುರಾಮನಿಂದ ಬ್ರಾಹ್ಮಣರಾಗಿ ನಿರ್ಮಿಸಲ್ಪಟ್ಟು
ನಂತರ ಶಾಪದಿಂದ ಭ್ರಷ್ಟರಾದವರು ರಾಜನೊಡನೆ ಈ ಪ್ರಕಾರ
ಜ್ಞಾಪಿಸಿಕೊಂಡರು. "ರಾಜವರ್ಯ! ಈ ಭೂಮಿಯನ್ನು ಪರಶು
ಮನು ನಮ್ಮ ಪೂರ್ವಿಕರಿಗೆ ದಾನಕೊಟ್ಟಿದ್ದನು. ಆದ್ದರಿಂದ ಇದು
ಮ್ಮದಾಗಿದೆ. ನಮ್ಮಿಂದ ಈ ಪ್ರದೇಶಗಳನ್ನು ಅಪಹರಿಸಿ ಆ ಬ್ರಾಹ್ಮಣರಿಗೆ
ೇಗೆ ಕೊಡುತ್ತಿ? ನಮ್ಮ ಗತಿಯೇನು" ಅವರ ಮಾತನ್ನು ಕೇಳಿ ಮಯೂರ
ರ್ಮನು, "ನಿಮಗೆ ನಾಲ್ಕು ಗ್ರಾಮಗಳನ್ನು ಕೊಡುವೆನು. ಅಲ್ಲಿ

ಮಾತ್ರ ನೀವು ಶಾಶ್ವತವಾಗಿ ನೆಲಸಿರಿ" ಎಂದು ಕುಶಸ್ಥಳ, ಸಾಸ್ಟಿ,
ಮತ್ತು ನಾಗಪುರಿ ಎಂಬ ನಾಲ್ಕು ಗ್ರಾಮಗಳನ್ನು ಕೊಟ್ಟನು. ಆ
ಈ ನಾಲ್ಕು ಗ್ರಾಮಗಳಲ್ಲಿ ಅವರು ನೆಲಸಿದರು. ಇವರೆಲ್ಲರೂ ಧ
ವಿಹೀನರು ಮತ್ತು ಸರ್ವಕರ್ಮ ಬಹಿಷ್ಕೃತರು ಎಂದು ಸಹ್ಯಾದ್ರಿ
ವಿವರಿಸಿದೆ. ನಾಗಪುರ ಎಂಬುದು ಚಕ್ರನದಿಯ ತೀರದಲ್ಲಿದೆ
ಹತ್ತೊಂಭತ್ತನೆಯ ಅಧ್ಯಾಯದಲ್ಲಿ ಹೇಳಿದೆ. ಈ ನಾಗಪುರದವರು
ಮಂಜೇಶ್ವರದಲ್ಲಿದ್ದಾರೆ. ಚೌಂಡೆಕಾಯಿ ಬೆಳೆಯು ಇವರ ವೈಶಿಷ್ಟ
(ಸ. ೧,—೨, ೧೨, ೧೩)

**ಪಾಟಾಳಿ ಉತ್ಪತ್ತಿ:** ಕಳಿಂಗ ದೇಶದಲ್ಲಿ ಹೇಮಮಾಲಿ
ರಾಜನಿದ್ದನು. ಅವನ ರಾಜಧಾನಿಯು ಕಾಂಚನಮಾಲಿ.
ದಿನ ರಾಜನು ಆಸ್ಥಾನದಲ್ಲಿ ವಿರಾಜಿಸುತ್ತಿದ್ದಾಗ, ಓರ್ವ ಬ್ರಾಹ್ಮ
ಪತ್ನಿಸಮೇತನಾಗಿ ಪ್ರವೇಶಿಸಿದನು. ರಾಜನು ಇವನನ್ನು ಮಧುಪರ್ಕ
ಗಳಿಂದ ಪೂಜಿಸಿದನು. ಆಗ ವಿಪ್ರಶ್ರೇಷ್ಠನು ಮಂತ್ರಪೂತವಾದ ಅ
ಯನ್ನು ತನ್ನ ಎಡಗೈಯಲ್ಲಿ ರಾಜನಿಗೆ ನೀಡಿದನು. ಈ ಪ್ರಕ
ಮಂತ್ರಾಕ್ಷತೆಯನ್ನು ಎಡಗೈಯಲ್ಲಿ ಕೊಡುವ ಕ್ರಮವನ್ನು ತಾನೆಲ್ಲಿ
ನೋಡಿಲ್ಲ ಎಂದು ರಾಜನು ನುಡಿದನು.

ರಾಜನ ವಚನವನ್ನು ಕೇಳಿ, ಆ ಬ್ರಾಹ್ಮಣನು ಕೋಪದಿ
"ನಿನ್ನಂತಹ ವಿವೇಕಾಂಧನಾದ ರಾಜನನ್ನು ನಾನೆಲ್ಲಿಯೂ ನೋಡಿರ
ದಿಲ್ಲ. ಆಗಲಿ, ಬ್ರಾಹ್ಮಣರ ಬಲಗೈಯಲ್ಲಿ ಅಗ್ನಿ ಇದೆಯೆಂದು ಶಾಸ್ತ್ರ
ನವು. ರಾಜನೇ ಈ ಅಗ್ನಿಪ್ರಭಾವವನ್ನು ನೀನೀಗ ನೋಡುವಿ.
ಮೇಲೆ ಬಲಗೈಯಿಂದ ಮಂತ್ರಾಕ್ಷತೆಯನ್ನು ಸ್ವೀಕರಿಸುವ ಶಕ್ತಿ ನಿನ
ದೆಯೋ ಎಂದು ವಿಚಾರಿಸು" ಎಂದು ಮಾರ್ನುಡಿದು ಮಂತ್ರಾಕ್ಷತೆಯ
ಅಗ್ನಿಯಾಸ್ತ್ರವನ್ನು ಅನುಸಂಧಾನ ಮಾಡಿ ಅದನ್ನು ಎಸೆದನು. ಪ್ರ
ಲಿಸುವ ಬೆಂಕಿಯನ್ನು ಕಾರುತ್ತ ಆ ಮಂತ್ರಾಕ್ಷತೆಯು ಕಾಳುಗ
ಸಿಡಿದು ಸುಡಲಾರಂಭಿಸಿದುವು. ರಾಜನು ಭಯಗ್ರಸ್ಥನಾಗಿ ಬ್ರಾಹ್ಮಣ
ಪಾದಗಳಿಗೆ ಎರಗಿ ಕ್ಷಮೆಯನ್ನು ಬೇಡಿದನು. ಅವನ ಪ್ರಭಾವ
ಮೆಚ್ಚಿ ರಾಜನು ಎಂಟು ಗ್ರಾಮಗಳನ್ನು ವಿಪುಲ ಧನಸಮೃಭರ

ನ್ನು ಕೊಟ್ಟು ಆ ವಿಪ್ರನನ್ನು ಗೌರವಿಸಿದನು. ರಾಜನನ್ನು ಆಶೀರ್ವ
ಆ ಬ್ರಾಹ್ಮಣನು ಹೊರಟುಹೋದನು. ತೀರ್ಥಕ್ಷೇತ್ರಗಳನ್ನು
ದರ್ಶಿಸುತ್ತಾ ಸಹ್ಯಾದ್ರಿ ಪರ್ವತದ ತಪ್ಪಲಿನಲ್ಲಿ ಹರಿಯುತ್ತಿರುವ
ಡಿಕಾ ನದಿ ದಂಡೆಯನ್ನು ಸೇರಿದನು. ಪರಿಶುದ್ಧವಾದ ಈ ನದೀ
ದಲ್ಲಿ ಸ್ನಾನವನ್ನು ಮಾಡಿ, ಪಂಚಯಜ್ಞಾದಿ ಕರ್ಮಗಳನ್ನು
ಧ್ಯಾಹ್ನಿಕ ಕ್ರಿಯೆಗಳನ್ನು ಪೂರೈಸಿ ವಿಶ್ರಮಿಸಿದನು.

ಸಾಯಂಕಾಲ ಮಂದಮಾರುತನು ಬೀಸುತ್ತಿರುವ ಸಮಯ.
ಬ್ಬರು ತಾರುಣ್ಯಭರಿತರಾದ ದಾಸಿಯರನ್ನು ಆ ಬ್ರಾಹ್ಮಣನು ನೋಡಿ
ತಿಗೆಟ್ಟನು. ಒಬ್ಬಳ ಹೆಸರು ಶ್ಯೇನ. ಇನ್ನೊಬ್ಬಳ ಹೆಸರು ಕಳಗಿ.
ಬ್ರಾಹ್ಮಣ ಇವರಲ್ಲಿ ಅನುರಕ್ತನಾದನು. ಕಾಲಕ್ರಮದಲ್ಲಿ ಶ್ಯೇನ
ಬವಳಲ್ಲಿ ಎಂಟು ಪುತ್ರರೂ, ಕಳಗಿಯಲ್ಲಿ ನಾಲ್ವರು ಪುತ್ರರೂ
ಸಿದರು.

ಆ ಮೇಲೆ ಒಂದು ದಿನ ಈ ವಿಪ್ರನು ತನ್ನ ಔರಸಪುತ್ರನನ್ನು ಕರೆದು,
ನೀತ! ಇವರನ್ನು ನೀನು ಸ್ನೇಹದಿಂದ ಪರಿಪಾಲಿಸಬೇಕು. ರಾಜದತ್ತ
ದ ಎಂಟು ಗ್ರಾಮಗಳು ಅವರಿಗೆ ಸಲ್ಲತಕ್ಕದ್ದು. ಪ್ರಾಪ್ತವಯಸ್ಕ
ದ ಮೇಲೆ ನನ್ನೀ ಆಜ್ಞೆಯಂತೆ ದೇವಾಲಯಗಳಲ್ಲಿ ನಿಯೋಜಿಸು.
ರು ಶಿವ ನಿರ್ಮಾಲ್ಯವನ್ನು ಸೇವಿಸುತ್ತಾ, ಛತ್ರ, ಕಟ್ಟಿಗೆ ಕೋಲು
ನ್ನು ಧರಿಸುತ್ತ, ಸಂಮಾರ್ಜನ ಮತ್ತು ಗೋಮಯ ಸಾರಿಸುವ
ಸಗಳನ್ನು ದೇವಾಲಯಗಳಲ್ಲಿ ಮಾಡುತ್ತಿರಬೇಕು. ಬ್ರಾಹ್ಮಣ ಸಮು
ಯದಲ್ಲಿ ಇವರು ಅಪಾಂಕ್ತೇಯರಾಗಿರುವರು," ಎಂದು ಆಜ್ಞಾಪಿಸಿ
ಯರೊಡನೆ ತಪಸ್ಸಿಗೆ ಹೊರಟುಹೋದನು.

ಯತ್ರಯತ್ರ ಶಿವಾಗಾರೆ ತತ್ರತತ್ರ ಮಮಾಜ್ಞಯಾ
(ಸ. ೨೩-೨೨)
ಶಿವನಿರ್ಮಾಲ್ಯ ಭುಂಜಾನೋ ಛತ್ರವೇತ್ರಾಣಿಧಾರಕಾಃ ॥
ಸಂಮಾರ್ಜನಾದಿಕಂ ಕೃತ್ವಾಯಥಾಗೋಮಯಲೇಪನಂ
(ಸ. ೨೩-೨೩)

ಅಪಾಂಕ್ತೇಯು ವಿಪ್ರಸಂಘೇ ಸಂಚರಂತು ಮಮಾಜ್ಞ
(ಸಂ. ೨

ಸುನೀತನು ಈ ಹನ್ನೆರಡು ದಾಸಿಪುತ್ರರಿಗೆ ದಾಸಿಕನ್ಯೆ
ತಂದು ವಿವಾಹಮಾಡಿಸಿದನು. ಇವರನ್ನು ತಂದೆಯು ಅಜ್ಞೆ
ದೇವಾಲಯುಗಳಲ್ಲಿ ನಿಯೋಜಿಸಿದನು.

ಶ್ರೀ ಗುರುನರಸಿಂಹ, ಹಿರೆಮಾಲಿಂಗೇಶ್ವರ, ಕೋಟಿಲಿ
ಮೊದಲಾದ ದೇವಾಲಯುಗಳಲ್ಲಿ ಈ ಪ್ರಕಾರದ ಕೆಲಸಮಾಡುತ್ತಿ
ರನ್ನು ಪಾಟಾಳಿ, ಮೆರ್ಟಿ, ಶಾನುಭಾಗ ಎಂಬ ಹೆಸರಿನಿಂದ ಕ
ತ್ತಾರೆ. ಇವರಿಗೆ ಸಹಪಂಕ್ತಿ ಇರುವುದಿಲ್ಲ. ಅಡ್ಡಪಂಕ್ತಿ ಸಂಪ್ರ
ವಿದೆ. ಇವರು ಸಮಾನ ವರ್ಣದವರಲ್ಲದ ಕಾರಣ ಕನ್ಯಾಸಂ
ವಿರುವುದಿಲ್ಲ.

ಚಿತ್ತಪಾವನ ಮತ್ತು ಕಾರಾಷ್ಟ್ರ: ಸಹ್ಯಾದ್ರಿಯ ಇಪ್ಪ
ನೆಯ ಅಧ್ಯಾಯವು ಚಿತ್ತಪಾವನರ ಉತ್ಪತ್ತಿಯನ್ನು ವಿವರಿಸು
ಪರಶುರಾಮನು ನಿರ್ಮಾಣ ಮಾಡಿದ ಕ್ಷೇತ್ರಗಳು ಬಹುಸಂಖ್ಯೆಯ
ಗೊತ್ತಮಾಚಲ ಎಂಬ ಪರ್ವತದ ಮಧ್ಯದಲ್ಲಿ ಕುಶಸ್ಥಳೀ ಎಂಬ
ವಿದೆ. ಇದರ ಸಮೀಪವೇ ಚತುರಂಗ ಪರ್ವತವಿದೆ. ಒಂದಾನೊ
ಕಾಲ ಪರಶುರಾಮನು ಶ್ರಾದ್ಧಕರ್ಮವನ್ನು ನಿರ್ವಹಿಸುವುದಕ್ಕೆ ಅ
ಬ್ರಾಹ್ಮಣರನ್ನು ಆಮಂತ್ರಿಸಿದ್ದನು. ಆದರೆ ಅವರಾರೂ ಬಾರದಿ
ದನ್ನು ನೋಡಿ ಸೂರ್ಯೋದಯ ಸಮಯ ಸ್ನಾನಮಾಡುವುದ
ಸಮುದ್ರತೀರಕ್ಕೆ ಹೊರಟನು. ಚಿತಾಸ್ಥಾನವಾದ ಸ್ಮಶಾನದಲ್ಲಿ
ಸ್ನಾತರಾಗಿ ಕೆಲವರು ಬರುತ್ತಿರುವುದನ್ನು ನೋಡಿ, "ನೀವಾರು? ಯ
ಜಾತಿಯವರು?" ಎಂದು ವಿಚಾರಿಸಿದನು. ಅದಕ್ಕೆ ಅವರು, "ಸಿಂಧು
ದಲ್ಲಿ ವಾಸಮಾಡುತ್ತಿರುವ ಕೈವರ್ತಕರು ವ್ಯಾಧಧರ್ಮನಿಪು
ಎಂದು ಉತ್ತರವಿತ್ತರು. ಅವರು ಅರವತ್ತು ಜನರಿದ್ದರು. ಅ
ರನ್ನು ಪರಶುರಾಮ ಪವಿತ್ರರನ್ನಾಗಿ ಮಾಡಿ, ಸಕಲವಿದ್ಯೆಯನ್ನು
ಗ್ರಹಿಸಿ, ಬ್ರಾಹ್ಮಣತ್ವವನ್ನು ಕೊಟ್ಟು ಪಿತೃಶ್ರಾದ್ಧವನ್ನು ನೆರವೇರಿಸಿ

ತಾಸ್ಥಾನದಲ್ಲಿ ಪವಿತ್ರರಾದುದರಿಂದ ಅವರಿಗೆ ಚಿತ್ತಪಾವನ ಎಂಬ ನಾಮಧೇಯವನ್ನಿಟ್ಟನು. "ಚಿತಸ್ಥಾನೆ ಪವಿತ್ರತ್ವಂ ಚಿತ್ತಪಾವನ ಸಂಜ್ಞಕಂ" ಕಾಲಕ್ರಮದಲ್ಲಿ ಪರಶುರಾಮನು ಕೊಟ್ಟ ಅಭಯವಾಚನ ವನ್ನು ಇವರು ಪರೀಕ್ಷಿಸಿದ ಕಾರಣ ಅವನಿಂದ ಶಪಿತರಾದರು. (ಸ. ೨೮-೩೭)

ರೇವತೀ ನದಿಯ ಉತ್ತರದಲ್ಲಿರುವ ದೇಶವೇ ಕಾರಾಷ್ಟ್ರದೇಶವೆನಿಸಿದೆ. ಅಲ್ಲಿ ವಾಸಿಸಿಕೊಂಡಿರುವವರು ಕಾರಾಷ್ಟ್ರ ಎನಿಸಿಕೊಂಡಿರುವರು. ಇವ ರೆಲ್ಲರೂ ಗಾಯತ್ರಿಯ ಒಂದು ಪಾದವನ್ನು ಮಾತ್ರ ಜಪಿಸುವವರಾಗಿ ಕೊಂಕಣ ಮೊದಲಾದ ವಿಭಾಗದಲ್ಲಿ ನಿವಾಸಮಾಡಿರುವರು. ಇವರು ಪದ್ಯಬ್ರಾಹ್ಮಣರೆಂದು ಕರೆಯಲ್ಪಡುತ್ತಾರೆ. ಶ್ರಾದ್ಧ, ಮೌಂಜಿಕರ್ಮ, ಮಾಂಗಲ್ಯಾದಿ ಕರ್ಮಗಳಲ್ಲಿ ಪದ್ಯರ ಆಗಮನವು ಕಾರ್ಯನಾಶಕ ಅಪ ಶಕುನವಾಗಿದೆ. ಇವರನ್ನು ಸರ್ವಧರ್ಮಾಚಾರಗಳಲ್ಲಿಯೂ ವಿಸರ್ಜಿಸ ಬೇಕೆಂದು ಸಹ್ಯಾದ್ರಿಯಲ್ಲಿ ಹೇಳಿದೆ. (ಸ. ೨೯, ೧೭-೨೦)



# 3

## ಕೂಟ ಬ್ರಾಹ್ಮಣರೂ ಮತ್ತು ಇತರ ಬ್ರಾಹ್ಮಣರ

**ಕೂಟ ಜಗತ್ತು:** ಈ ವಿಭಾಗದ ವಿಚಾರವು ಹಲವರ ವಿಚಾರಿಸಿ ಸಂಗ್ರಹಿಸಿದ್ದಾಗಿದೆ. ವಿಪ್ರಾಗ್ರಣಿಯಾದ ಭಟ್ಟಾಚಾರ್ಯ ಅಹಿಚ್ಛತ್ರದಿಂದ ಲೋಕಾದಿತ್ಯನೊಡನೆ ಬಂದು ನಮ್ಮ ಜಿಲ್ಲೆಯಲ್ಲಿ ಸ್ಥಾಪಿ ಬ್ರಾಹ್ಮಣರೆಲ್ಲರೂ ಭಸ್ಮಧಾರಿಗಳೂ ಪಂಚಾಯತನ ಉಪಾಸಕ ಆಗಿದ್ದರು. ಅವರೆಲ್ಲರೂ

**ಆದಿತ್ಯಮಂಬಿಕಾಂ ವಿಷ್ಣುಂ ಗಣನಾಥಂ ಮಹೇಶ್ವರಂ ।**
**ಬ್ರಾಹ್ಮಣಃ ಪೂಜಯೇತ್ಪಂಚ ಪಂಚಯಜ್ಞ ಪರಾಯಣಃ**

ಆದಿತ್ಯ (ಸೂರ್ಯ), ಅಂಬಿಕಾ (ಶಕ್ತಿ), ವಿಷ್ಣು, ಗಜಾನನ (ಗಣಪ ಮತ್ತು ಮಹೇಶ್ವರ (ಈಶ್ವರ) ಎಂಬೀ ಪಂಚದೇವರನ್ನು ನಿತ್ಯ ಪೂಜಿಸುತ್ತಿದ್ದರು. ಆದರೆ ಅವರೆಲ್ಲರೂ ಸಮಾನ ವರ್ಗದವರಾಗಿರಲಿ ಕೂಟ ಗ್ರಾಮದಲ್ಲಿ ಮತ್ತು ಶಿವಳ್ಳಿ ಗ್ರಾಮದಲ್ಲಿ ನೆಲಸಿದವರಲ್ಲಿ ಮೊದಲ ಹತ್ತು ಗೃಹದವರು ಮಾತ್ರ ಅತೀವ ಶ್ರೇಷ್ಠರೆಂದು ಸಹ್ಯಾದ್ರಿ ಖಂಡದ ಹೇಳಿಯದೆ. ಕೂಟ ಗ್ರಾಮದಲ್ಲಿ ನೆಲಸಿದ ಬ್ರಾಹ್ಮಣರು ಕಾಲಕ್ರಮದಿಂ ಜಗತ್ತಿನವರು ಎಂದು ಕರೆಯಲ್ಪಟ್ಟಿರುವರು. ಇವರಲ್ಲಿ ಎಂಟು ಗೃ ಗಳೂ ಹದಿನೆಂಟು ಗೃಹಭೇದಗಳೂ ಮತ್ತು ಹನ್ನೆರಡು ಅಗ್ನಿಹೋ ಗಳಿದ್ದವು.

**ಶಿವಳ್ಳಿ ಬ್ರಾಹ್ಮಣರು:** ಅಹಿಚ್ಛತ್ರದಿಂದ ಬಂದ ಬ್ರಾಹ್ಮಣರ ಒಂದು ಪಂಗಡದವರು ಉಡುಪಿಯಲ್ಲಿರುವ ಶ್ರೀಮದನಂತೇಶ್ವರ ದೇವ ಲಯದ ಸುತ್ತುಮುತ್ತಿನ ಪ್ರದೇಶದಲ್ಲಿ ನೆಲಸಿದರು. ಈ ದೇವರಿ ರಜತ ಪೀಠದ ಅಥವಾ ಬೆಳ್ಳಿ ಪೀಠದ ಶಿವನೆಂದೂ ಹೆಸರಿತ್ತು. ರಜ ಪೀಠದ ಶಿವನ ಆಶ್ರಯ ಪಡೆದ ಈ ಬ್ರಾಹ್ಮಣ ವರ್ಗದವರಿಗೆ ಈ ಹೆಸ ಅನ್ವಯಿಸಿಕೊಂಡು ಶಿವಬೆಳ್ಳಿಯ ಬ್ರಾಹ್ಮಣರು ಎಂದು ಕರೆಯಲ್ಪಟ್ಟರ ಕಾಲಕ್ರಮದಲ್ಲಿ ಇವರು ಶಿವಳ್ಳಿಯವರೆಂದು ಕರೆಯಲ್ಪಟ್ಟರೆಂದ ತೋರುತ್ತದೆ.

ಈ ಶಿವಳ್ಳಿ ಗ್ರಾಮದ ಗೃಹಭೇದಗಳು ಸಹ್ಯಾದ್ರಿ ಖಂಡದಲ್ಲಿ ಈ ಪ್ರಕಾರ ನಿರೂಪಿತವಾಗಿದೆ.

**ಶಿವಬಳ್ಳ್ಯಾಂ ವಿಶೇಷಜ್ಞಃ ವಿಂಶದ್ಭೇದಂ ಶತೋತ್ತರಂ**
**(ಸ. ೬-೧೮)**
**ಶ್ರೇಷ್ಠದಶಾದೌ ತದ್ವಚ್ಚ ಚತ್ವಾರಿಂಶಚ್ಚ ಮಧ್ಯಮಾಃ ।**
**ಅಂತ್ಯೇಸಪ್ತತಿರಿತ್ಯೇವಂ ಚೋತ್ತಮಾಧಮ ಮಧ್ಯಮಾಃ**
**(ಸ. ೬-೧೯)**

ಇವರಲ್ಲಿ ಮೊದಲನೆಯ ಹತ್ತು ಗೃಹಭೇದಗಳು ಉತ್ತಮವಾದವು. ನಂತರದ ನಲ್ವತ್ತು ಗೃಹಭೇದಗಳು ಮಧ್ಯಮ ಮತ್ತು ಕೊನೆಯ ಎಪ್ಪತ್ತು ಗೃಹಭೇದಗಳು ಹೀನವಾದವು. ಅಂತು ಶಿವಳ್ಳಿ ಬ್ರಾಹ್ಮಣರಲ್ಲಿ ಈ ಪ್ರಕಾರದ ಪರಿಭೇದದಿಂದ ನೂರಿಪ್ಪತ್ತು ಗೃಹಭೇದಗಳಿದ್ದುವು. ಮೊದಲಿನ ಹತ್ತರಲ್ಲಿ ಹತ್ತು ಅಗ್ನಿಹೋತ್ರಗಳು, ನಡುವಿನ ನಲ್ವತ್ತರಲ್ಲಿ ನಾಲ್ಕು ಮತ್ತು ಕೊನೆಯ ಎಪ್ಪತ್ತರಲ್ಲಿ ಒಂದು ಅಗ್ನಿಹೋತ್ರ ಮಾತ್ರ ಇದ್ದುವು.

ಆದ್ದರಿಂದ ಅಹಿಚ್ಛತ್ರದಿಂದ ಬಂದು ನೆಲಸಿದ ಬ್ರಾಹ್ಮಣರಲ್ಲಿ ಗೃಹಭೇದಗಳೂ, ವರ್ಗಭೇದಗಳೂ ಇದ್ದು ಅವರೆಲ್ಲರೂ ಸಮಾನ ವರ್ಣ ಬ್ರಾಹ್ಮಣರಲ್ಲವೆಂದು ಸಿದ್ಧವಾಗುತ್ತದೆ. ಅಲ್ಲದೆ ಅವರಲ್ಲಿ ಪರಸ್ಪರ ನಂಟಸ್ಥಿಕೆ ಮೊದಲಾದ ವ್ಯವಹಾರ ಆಚಾರಗಳಲ್ಲಿ ಬಹಳ ನಿರ್ಬಂಧ ಕಡುಕಟ್ಟುಗಳಿದ್ದುವೆಂದು ತೋರುತ್ತದೆ. ಇತ್ತೀಚಿನವರೆಗೂ ಕೂಟ ಬ್ರಾಹ್ಮಣರಲ್ಲಿ ಶಿವಳ್ಳಿ ಬ್ರಾಹ್ಮಣರೊಡನೆ ನಂಟಸ್ಥಿಕೆಯು ಬಹಳ ಅಪರೂಪವಾಗಿ ಮಾತ್ರ ನಡೆದದ್ದು ಕಾಣುತ್ತದೆ. ಶಿವಳ್ಳಿ ಬ್ರಾಹ್ಮಣರ ಉತ್ತಮ ಹತ್ತು ಗೃಹದವರೊಡನೆ ವಿವಾಹವನ್ನು ನಡೆಯಿಸಬಹುದು. ಆದರೆ "ನಲ್ವತ್ತರ ಶಿವಳ್ಳಿ" ಮತ್ತು "ಎಪ್ಪತ್ತರ ಶಿವಳ್ಳಿ"ಯು ನಂಟಸ್ಥಿಕೆ ಉಚಿತವಲ್ಲವೆಂಬ ಭಾವನೆಯು ತೀರ ಸಾಮಾನ್ಯವಾಗಿತ್ತು.

ಭಟ್ಟಾಚಾರ್ಯನು ಕದಂಬ ರಾಜ್ಯದಲ್ಲಿ ಬ್ರಾಹ್ಮಣರನ್ನು ಸ್ಥಾಪಿಸಿದ ಮೇಲೆ ಅಹಿಚ್ಛತ್ರಕ್ಕೆ ಹೋದನೆಂದು ಪ್ರತೀತಿ ಇದೆ. ಆಗ ಇಬ್ಬರು ಶಿಷ್ಯರು ಮಾತ್ರ ಅವನನ್ನು ಅಗಲಿರಲಾರದೆ ಅನುಸರಿಸಿದರು. ಆಗ

ಭಟ್ಟಾಚಾರ್ಯನು, "ನೀವು ನನ್ನೊಡನೆ ಬಂದರೆ ನಾನು ಲೋಕಾ
ರಾಜನಿಗೆ ಕೊಟ್ಟ ವಚನವು ಹುಸಿಯಾಗುವುದು. ಆದ್ದರಿಂದ ನಿ
ನನ್ನನ್ನು ಅನುಸರಿಸದೆ ಹೋಗಲೇಬೇಕು" ಎಂದು ಆಜ್ಞಾಪಿಸಿದ
ಗುರುವಿನ ಆಜ್ಞೆಯಂತೆ ಅವರಿಬ್ಬರು ಹಿಂದಕ್ಕೆ ಬಂದರು. ಅವರಲ್ಲಿ
ಶಿಷ್ಯನು ಶಿವಬೆಳ್ಳಿ ಗ್ರಾಮದಲ್ಲಿ ನೆಲಸಿ, ಅನಂತರ ಪರಿಷದ ಸನ
ವನ್ನು ಪರಿಗ್ರಹಿಸಿದನೆಂದೂ, ಅವನೇ ಶಿವಳ್ಳಿ ವಿಪ್ರಮಂಡಲಕ್ಕೆ ಮು
ಮಠಾಧೀಶನಾದನೆಂದೂ ಕಾಲಕ್ರಮೇಣ ಆ ಮಠವೇ ಬಾಳೇಕುದ್ರಿ
ಸ್ಥಾಪಿತವಾಯಿತೆಂದೂ ನಂಬಲರ್ಹವಾದ ಪ್ರತೀತಿ ಇದೆ.

ಅಹಿಚ್ಛತ್ರದಿಂದ ಬಂದನಂತರ ಅವಿಚ್ಛಿನ್ನವಾಗಿ ಅನೇಕ ಶತಮಾ
ಗಳವರೆಗೆ ಪರಂಪರಾಗತ ಸ್ಮಾರ್ತಸಂಪ್ರದಾಯವೂ, ಭಸ್ಮಧಾರ
ಪಂಚಾಯತ ಪೂಜಾ ವಿಧಾನಾದಿಗಳೂ ನಮ್ಮ ಜಿಲ್ಲೆಯಲ್ಲಿ ನೆಲಸಿದ್ದ
ಹಲವು ಶತಮಾನಗಳ ನಂತರ ಉಡುಪಿಯಲ್ಲಿ ಮಧ್ವಾಚಾರ್ಯರು ತ
ದ್ವೈತಮತವನ್ನು ಸ್ಥಾಪಿಸಿದಾಗ ಶಿವಳ್ಳಿ ಗ್ರಾಮದಲ್ಲಿದ್ದ ಹೆಚ್ಚಿನವ
ಮಾಧ್ವರಾದರು. ಆದರೆ ನೆರೆ ಗ್ರಾಮಗಳಲ್ಲಿದ್ದ ಶಿವಳ್ಳಿ ಬ್ರಾಹ್ಮಣ
ತಮ್ಮ ಸ್ಮಾರ್ತಸಂಪ್ರದಾಯದ ನಿಷ್ಠೆಯನ್ನು ತ್ಯಜಿಸದೆ ಶ್ರೀ ಬಾಳೇಕು
ಮಠದ ಶಿಷ್ಯರಾಗಿಯೇ ಉಳಿದಿರುವರು. ಅವರೆಲ್ಲರೂ ಇಂದಿಗೂ ತ
ಪ್ರಾಚೀನ ಧರ್ಮಾಚರಣೆಯಾದ ಭಸ್ಮಧಾರಣೆ, ಪಂಚಾಯತನ ಪೂ
ಮೊದಲಾದ ಆಚಾರಗಳಲ್ಲಿ ನಿಷ್ಠರಾಗಿದ್ದಾರೆ. ಅವರು ವೈಷ್ಣವರ
ಅವರು ದ್ವೈತಿಗಳೂ ಅಲ್ಲ ಮತ್ತು ಮಾಧ್ವರೂ ಅಲ್ಲ. ಅವರು ಸ್ಮಾ
ಸಂಪ್ರದಾಯವನ್ನು ಆಚರಿಸುವ ಅದ್ವೈತಿಗಳಾಗಿದ್ದಾರೆ. ಅವ
ಶಿವಳ್ಳಿಯ ಉತ್ತಮ ವರ್ಗಕ್ಕೆ ಸೇರಿದವರು. ಅವರ ಆಚಾರವಿಚಾರಗ
ಕೂಟ ಜಗತ್ತಿನವರ ಆಚಾರವಿಚಾರಗಳು ಬಹುಮಟ್ಟಿಗೆ ಸಮಾನವಾ
ಕೂಡಿಬರುತ್ತವೆ. ಆದ್ದರಿಂದ ಈ ವರ್ಗದಲ್ಲಿ ನಂಟಸ್ಥಿಕೆ ನಡೆದುಬರುತ್ತ

ಭಟ್ಟಾಚಾರ್ಯನನ್ನು ಹಿಂಬಾಲಿಸಿದ ಇನ್ನೊರ್ವ ಶಿಷ್ಯನು ಸ್ಕಂದಸ
ಎಂಬ ಪ್ರದೇಶದಲ್ಲಿ ನೆಲೆಸಿದನು. ಅವನ ಆಜ್ಞೆಯಂತೆ ಈ ಶಿಷ್ಯ
ಸ್ಕಂದ ದೇವರನ್ನು ಗುರುವಾಗಿ ಭಾವಿಸಿ ಆರಾಧಿಸಲಾರಂಭಿಸಿದನ
ಅಲ್ಲಿ ನೆಲಸಿದವರೆಲ್ಲಾ ಸ್ಕಂದನನ್ನೇ ಗುರುವಾಗಿ ನಂಬಿ ಬಂದರು. ಅ

ಲ್ಲರೂ ಸ್ಕಂದ ಬ್ರಾಹ್ಮಣರೆಂದು ಕರೆಯಲ್ಪಟ್ಟರು. ಕಾಲಕ್ರಮದಲ್ಲಿ ಸ್ಕಂದ ಎಂಬ ನಾಮವು ಕಂದ ಎಂದು ಮಾರ್ಪಟ್ಟು ಅವರು ಕಂದಾವರ ಬ್ರಾಹ್ಮಣರಾದರು. ಅವರಲ್ಲಿ ಎರಡು ಗೃಹಭೇದಗಳಿವೆ. ಅವರು ಭಸ್ಮಧಾರಿಗಳು ಮತ್ತು ಸ್ಮಾರ್ತ ಸಂಪ್ರದಾಯವನ್ನಾಚರಿಸುವ ಅದ್ವೈತಿಗಳು. ಅವರ ಆರಾಧ್ಯ ದೇವರಾದ ಸ್ಕಂದ ದೇವಸ್ಥಾನವು ಈಗಿನ ಕಂದಾವರ ಗ್ರಾಮದಲ್ಲಿದೆ. ಈ ದೇವಸ್ಥಾನವು ಶ್ರೀ ಬಾಳೇಕುದ್ರು ಮಠದ ಅಧೀನ ಬಹಳ ಕಾಲ ಇತ್ತು; ಆ ಮೇಲೆ ಮಠದವರು ಈ ಗ್ರಾಮಸ್ಥರಿಗೆ ಅದನ್ನು ಬಿಟ್ಟುಕೊಟ್ಟರು. ಈ ಕಂದಾವರ ಬ್ರಾಹ್ಮಣರಲ್ಲಿ ಅನೇಕರು ತಮ್ಮ ಲಗ್ನವೊದಲಾದ ಪತ್ರಿಕೆಗಳಲ್ಲಿ ಶ್ರೀ ಸ್ಕಂದ ಗುರುದೇವನನ್ನು ಸ್ಮರಿಸುವ ವಾಡಿಕೆ ಇದೆ. ಅವರಲ್ಲಿ ಹೆಚ್ಚಿನವರು ಶ್ರೀ ಬಾಳೇಕುದ್ರು ಮಠದ ಶಿಷ್ಯರೆಂದು ತೋರುತ್ತದೆ.

ಭಟ್ಟಾಚಾರ್ಯನು ಕೂಟಜಗತ್ತಿನ ಮತ್ತು ಇತರ ಪ್ರದೇಶದ ತಾಂತ್ರಿಕ ವೃತ್ತಿಯನ್ನು ಪೌರೋಹಿತ್ಯವನ್ನು ಕಾರತಟ್ಟು ಕಾರಂತನಿಗೆ ಕೊಟ್ಟ ವಿಚಾರದ ಲೋಕಾಧಿತ್ಯ ಪದ್ಧತಿಯ ಶ್ಲೋಕವನ್ನು ಮೊದಲನೆಯ ಭಾಗದಲ್ಲಿ ಉದಾಹರಿಸಿದೆ. ಕೆಲವು ಕಾಲ ಕಾರಂತನ ಗೃಹದವರೇ ಕೂಟಜಗತ್ತಿನ ಪೌರೋಹಿತ್ಯವನ್ನು ತಾಂತ್ರಿಕ ವೃತ್ತಿಯನ್ನು ನಿರ್ವಹಿಸಿ ಕೊಂಡುಬಂದರು. ಕೂಟಜಗತ್ತಿನಿಂದ ಪರವೂರುಗಳಿಗೆ ಹೋಗಿ ನೆಲಸಿರುವ ಕೂಟಬ್ರಾಹ್ಮಣರು ಪೌರೋಹಿತ್ಯಾದಿ ಕಾರ್ಯಗಳನ್ನು ನಿರ್ವಹಿಸುವು ದನ್ನು ನಾವು ಇಂದಿಗೂ ನೋಡಬಹುದು. ಆದರೆ ಕೂಟಜಗತ್ತಿನಲ್ಲಿಯೇ ನೆಲಸಿದ್ದವರಲ್ಲಿ ಕಾಲಕ್ರಮೇಣ ಇತರರ ದ್ರವ್ಯಕ್ಕಾಗಿ ವೇದಪಾರಾಯಣ, ವೇತನಕ್ಕಾಗಿ ದೇವರ ಅರ್ಚಕ, ಮತ್ತು ತಾಂತ್ರಿಕ ವೃತ್ತಿಯನ್ನು ಮಾಡು ವುದು ಅತೀವ ಹೀನಕರ್ಮವೆಂದು ನಿರ್ಧರಿಸಿದಂತೆ ತೋರುತ್ತದೆ. ಮನು ಧರ್ಮಶಾಸ್ತ್ರದ ಮೂರನೆಅಧ್ಯಾಯದ 152ನೇ ಶ್ಲೋಕದಲ್ಲಿ 'ದೇವಲಕಾನ್' ಎಂದರೆ ದೇವ ಮಂದಿರಗಳಲ್ಲಿ ಪೂಜೆಮಾಡುವವರು ಹವ್ಯಕವ್ಯಕರ್ಮಾಂ ಗಗಳಲ್ಲಿ ವರ್ಜಿತರೆಂದು ಹೇಳಿರುವನು. ಶಂಕರಾಚಾರ್ಯರೂ ಇಂತಹ ವೃತ್ತಿಮಾಡುವವರು ಉತ್ತಮ ಬ್ರಾಹ್ಮಣರಲ್ಲವೆಂದಿರುವರು. ಸಮಗ್ರ ಭಾರತದಲ್ಲಿಯೂ ಈ ಪ್ರಕಾರದ ಭಾವನೆ ಇದ್ದಂತೆ ತೋರುತ್ತದೆ.

ಪ್ರಾಯಶಃ ಈ ಪ್ರಕಾರದ ನಿಷೇಧವಿಚಾರವನ್ನು ಮನಗೊಂಡು ಕೂ
ಜಗತ್ತಿನವರು ಪೌರೋಹಿತ್ಯ ಮತ್ತು ತಾಂತ್ರಿಕ ವೃತ್ತಿಯನ್ನು ಕೈಬಿ
ಬೇಕೆಂದು ನಿರ್ಧಾರಕ್ಕೆ ಬಂದು ಈ ವೃತ್ತಿಗಳಿಗೆ ಶಿವಳ್ಳಿಬ್ರಾಹ್ಮಣ
ಉತ್ತಮ ವರ್ಗದವರನ್ನು ಕಂದಾವರದವರನ್ನು ನಿಯೋಜಿಸಿದಂತೆ ಕೊ
ತ್ತದೆ. ಆದಕಾರಣ ಭಟ್ಟಾಚಾರ್ಯನು ಕೊಟ್ಟ ದಶಭುಜಗಣಪತಿ
ತಾಂತ್ರಿಕವೃತ್ತಿಯೂ ಬೆಳ್ಳಂಜಿ ಭಟ್ಟನಿಗೆ ಒಪ್ಪಿಸಲ್ಪಟ್ಟವು. ಪೌರೋ
ಹಿತ್ಯವು ಐತಾಳರೆಂಬ ಕುಲದವರಿಗೆ ಒಪ್ಪಿಸಲ್ಪಟ್ಟಿತು. ದೇವಸ್ಥಾನ
ಪೂಜಾವೃತ್ತಿಗಳು ಅಡಿಗಳೆಂಬ ವರ್ಗದವರಿಗೆ ಕೊಡಲಾಯಿತು.
ವೃತ್ತಿಗಳನ್ನು ನೆರವೇರಿಸುವುದಕ್ಕಾಗಿ ಅವರು ಕೂಟಜಗತ್ತಿನಲ್ಲಿಯೇ ನೆಲ
ಬೇಕಾಗಿಬಂತು. ಕಾಲಕ್ರಮದಲ್ಲಿ ಅವರಲ್ಲಿ ಹೆಚ್ಚಿನವರು ಕೂಟಮತ
ರೊಡನೆ ಎಲ್ಲಾ ವ್ಯವಹಾರಗಳಲ್ಲಿ ಕಲೆತು ಕೂಟಬ್ರಾಹ್ಮಣರಾಗಿ ಸವಿ
ಕೃತರಾದರು. ನಮ್ಮಲ್ಲಿ ಪುರೋಹಿತರಾಗಿರುವ ಐತಾಳರು ಈ ವರ್ಗ
ಸೇರಿದವರಾಗಿದ್ದಾರೆ. ಇವರ ಪೂರ್ವಾಂಕಿತ ಗೃಹನಾಮಗಳು ಈ
ತಿಳಿದುಬರುವುದಿಲ್ಲ. ಕುಂಜೂರು ಎಂಬಲ್ಲಿಂದ ಬಂದ ಬಾಯರಿತ್ತಾಯರ
ಕೆಲವು ಮನೆಗಳು ಶ್ರೀಗುರು ನೃಸಿಂಹನನ್ನೇ ಗುರುವಾಗಿ ಸ್ವೀಕರಿಸಿ ಕೂ
ಮತಸ್ಥರಾಗಿರುವರು. ಕೆಲವರು ಸ್ಮಾರ್ತಶಿವಳ್ಳಿಯಾಗಿಯೇ ಇರುವರ
ಕಾಲಕ್ರಮದಿಂದ ಬಾಯರಿತ್ತಾಯರು ಬಾಯರ್ರು ಎಂದು ಕರೆ
ಲ್ಪಟ್ಟರು. ಕಾಸರಗೋಡು ತಾಲೂಕಿನ ಆದೂರು ಸಮೀಪ ಇರು
ಸಸಿಹಿತ್ಲು ಎಂಬಲ್ಲಿಂದ ಬಂದ ಷಡಂಗತ್ತಾಯ ಎಂಬ ಕುಲದವ
ಆದಿಯಲ್ಲಿ ಇವರು ಪಾಂಡೇಶ್ವರ ಗ್ರಾಮದಲ್ಲಿ ಗಣಪತಿ, ರಕ್ತೇಶ್ವ
ಮೊದಲಾದ ದೇವ ದೈವರ ಪೂಜೆಗೆ ನೇಮಿಸಲ್ಪಟ್ಟಿದ್ದರು. ಕಾಲಕ್ರಮದ
ಅವರು ಚಡಗತ್ತಾಯ ಎಂತಲೂ ಚಡಗ ಎಂತಲೂ ಕರೆಯಲ್ಪಟ್ಟರ
ಇವರಲ್ಲಿ ಒಂದು ವಿಭಾಗವು ಕುಂದಾಪುರ ತಾಲೂಕಿನಲ್ಲಿ ನೆಲಸಿ ಕೂ
ಮತಸ್ಥರಾಗಿ ಸಮೀಕರಣರಾಗಿರುವರು. ಅವರಲ್ಲಿ ಪಾಂಡೇಶ್ವ
ಗ್ರಾಮದಲ್ಲಿ ಉಳಿದವರು ಸ್ಮಾರ್ತ ಶಿವಳ್ಳಿಯವರಾಗಿಯೂ, ಹಿರಿಯಡ್ಕ
ಹೋದವರು ಮಾಧ್ವರಾಗಿಯೂ ಇರುವರು.

ಕೂಟಮತಸ್ಥರಾದ ನಮ್ಮಲ್ಲಿ ಕೆಲವು ಕಾಲದಿಂದ ಹೊಸ ಗೃ
ಪ್ರಭೇದಗಳು ಕಾಣಬಂದಿವೆ. ಹೊಳ್ಳಪ್ರಭೇದದ ಓರ್ವನು ಆಲ

ಂದ ಜಗತ್ತಿನ ಮಹಾಸಭೆಗೆ ಬಾರದಿದ್ದ ಕಾರಣ ಅಲ್ಸೆ ಎಂದು ದೂಷಿತ ಾಗಿ ಅವನ ಕುಲದವರಿಗೆ ಇಂದಿಗೂ ಆ ಹೆಸರು ಉಳಿದುಕೊಂಡಿದೆ. ಹಸ್ರ ಎಂಬುದು ವೈಯು ಪ್ರಭೇದ ಎಂದು ಹೇಳುತ್ತಾರೆ. ಅಧಿಕಾರಿ, ಕ್ಷತ್ರಿ, ವೈದ್ಯ ಮತ್ತು ಮಧ್ಯಸ್ಥ ಈ ಪ್ರಭೇದಗಳ ಮೂಲವಿಚಾರವು ಳಿದುಬಂದಿರುವುದಿಲ್ಲ.

ಕಾರ್ಯವಂತನಿಂದ ತಾಂತ್ರಿಕವೃತ್ತಿಯನ್ನು ಪಡೆದ ಬೆಳ್ಳಂಜಿ ಭಟ್ಟನ ವಂಶದಲ್ಲಿ ಕ್ರಮೇಣ ಒಬ್ಬ ಬ್ರಹ್ಮಚಾರಿ ಮಾತ್ರ ಉಳಿದು, ಅವನು ಅಕಾಲ ಮರಣಹೊಂದಿದ್ದರಿಂದ, ಕೂಟಜಗತ್ತಿನಲ್ಲಿರುವ ದೇವಸ್ಥಾನಗಳ ತಾಂತ್ರಿಕ ವೃತ್ತಿಯು ಕೋಟದ ಈಗಿನ ಚಿತ್ರಪಾಡಿ ಗ್ರಾಮದ ಕಾರ್ತಟ್ಟು ಎಂಬಲ್ಲಿ ರುವ ಸೋಮಯಾಜಿಗಳಿಗೆ ಸೇರಿ, ಅವರಿಂದ ನಡೆದುಬರುತ್ತದೆ. ದಶ ಭುಜ ಗಣಪತಿ ಮೂರ್ತಿಯು ಅವರಲ್ಲೊಬ್ಬರಾದ ದೀಕ್ಷಿತ ವೆಂಕಟಕೃಷ್ಣ ಸೋಮಯಾಜಿಗಳಲ್ಲಿ ಇದೆ. ಈ ಸೋಮಯಾಜಿಗಳ ವಂಶದವರು ಆದಿಯಲ್ಲಿ ಮಲ್ಪೆಯಲ್ಲಿ, ನಂತರ ಸಮುದ್ರ ಪಾಲಾದ ಗುಡ್ಡೆಯ ಪ್ರದೇಶ ದಲ್ಲಿ, ನೆಲಸಿದ್ದ ಕಾರಣ ಗುಡ್ಡೆ ಸೋಮಯಾಜಿಗಳೆಂದು ಇಂದಿಗೂ ಕರೆ ಯಲ್ಪಡುತ್ತಾರೆ. ಅನಂತರ ಇವರಲ್ಲಿ ಒಂದು ಶಾಖೆಯವರು ತೆಂಕು ಡೂರಿನಲ್ಲಿಯೂ ಒಂದು ಕವರಿನವರು ಮೇಲೆ ಹೇಳಿದ ಕಾರ್ತಟ್ಟಿ ನಲ್ಲಿಯೂ ನೆಲಸಿದರು. ಇವರಲ್ಲಿ ಉಪಾಧ್ಯರು ಎಂದು ಕರೆಯಲ್ಪಡು ನವರು ಇಂದಿಗೂ ಮಲ್ಪೆಯಲ್ಲಿಯೇ ಇದ್ದಾರೆ. ಇವರೆಲ್ಲರೂ ಗಣಪತಿ ಯನ್ನು ಕುಲದೇವರಾಗಿ ಆರಾಧಿಸುತ್ತಿದ್ದರು. ಇವರ ಮೂಲಗಣ ಪತಿಯು ಮಲ್ಪೆ ಉಪಾಧ್ಯರಲ್ಲಿದೆ. ಇವರೆಲ್ಲರಲ್ಲಿ ಲಗ್ನ ಮೊದಲಾದ ಪತ್ರಿಕೆಗಳಲ್ಲಿ ಶ್ರೀ ಗಣೇಶ ಪ್ರಸನ್ನ ಎಂದು ಪ್ರಕಾಶಿಸುವ ಕ್ರಮ ಇದೆ.

ಈ ಸೋಮಯಾಜಿಗಳ ಕುಲದಲ್ಲಿ ಯೋಗ್ಯ ಕರ್ಮಾಂಗವಿಶಾರದರೂ ತಿಲೆಶಿಲೆಯಿಂದ ಯಜ್ಞಗಳನ್ನು ಮಾಡಿದ ದೀಕ್ಷಿತರೂ ಇದ್ದಾರೆ. ಇವರೆಲ್ಲರೂ ಭಸ್ಮಧಾರಿಗಳು ಮತ್ತು ಸ್ಮಾರ್ತ ಸಂಪ್ರದಾಯವನ್ನು ಆಚರಿಸುವವರೂ ಆಗಿದ್ದಾರೆ. ಆದರೆ ಇವರೆಲ್ಲರೂ ಸ್ವರ್ಗಕಾಮಿಗಳಾದ ಯಾಜ್ಞಿಕರಾಗಿರು ವುದರಿಂದ ಮೀಮಾಂಸಕರೆಂದು ನಿರ್ಧರಿಸಬೇಕಾಗುತ್ತದೆ. ಇವರು ಕೂಟ ಮತಸ್ಥರಲ್ಲ. ಬಾಳೇಕುದ್ರು ಮಠದ ಶಿಷ್ಯರೂ ಅಲ್ಲ. ತಮ್ಮ

ಮೂಲ ಗೃಹಭೇದಾದಿಗಳನ್ನು ತಿಳಿಸಲು ಇಷ್ಟಪಡುವುದಿಲ್ಲ. ಆದಕಾ
ಇವರ ಮೂಲವಿಚಾರವು ತಾತ್ಕಾಲಿಕ ಗುಟ್ಟಾಗಿಯೇ ಉಳಿಯುವ
ಗಿದೆ. ಆದರೆ ಕಾರ್ಕಡ ಗ್ರಾಮದಲ್ಲಿ, ಹಂದಟ್ಟಿನಲ್ಲಿ ನೆಲಸಿರುವ ಸೋ
ಯಾಜಿಗಳ ಕುಲದವರು ಕೂಟಜಗತ್ತಿಗೆ ಸೇರಿದ ಕೂಟಮಠಸ್ಥರಾಗಿರುವ

ಕೂಟ ಮಠಸ್ಥರ ಸಂಪ್ರದಾಯಗಳು:—ಕೂಟ ಮಠಸ್ಥರ
ನಮ್ಮ ಸಂಪ್ರದಾಯಗಳಲ್ಲಿ ಪ್ರಾಮುಖ್ಯವಾದವನ್ನು ಮಾತ್ರ ಇಲ್ಲಿ ವಿ
ಸಲು ಸಾಧ್ಯವು. ಮೊದಲನೆಯದಾಗಿ ಸಾಲಿಗ್ರಾಮ ಕ್ಷೇತ್ರದ ಶ್ರೀಯೋ
ನಂದ ನೃಸಿಂಹ ದೇವರನ್ನು ಮಾತ್ರ ಗುರುವಾಗಿ ಸ್ವೀಕರಿಸುವುದು ಕೂ
ಮಠಸ್ಥರ ಆದ್ಯ ಮತ್ತು ಸರ್ವಶ್ರೇಷ್ಠವಾದ ಧರ್ಮವಾಗಿದೆ. ಕೂ
ಮಠಸ್ಥರಲ್ಲಿ ಜರಗುವ ಶುಭಶೋಭನಾದಿಗಳಲ್ಲಿ ಗುರುಕಾಣಿಕೆಯನ
ತಪ್ಪದೆ ಗುರುದೇವರಿಗೆ ಸಲ್ಲಿಸಲೇಬೇಕು. ಶ್ರೀ ಗುರುನೃಸಿಂಹ ಪ್ರೀತ್ಯರ್ಥ
ಅಥವಾ ಶ್ರೀ ಯೋಗಾನಂದನೃಸಿಂಹಪ್ರೀತ್ಯರ್ಥಂ ಎಂದು ಸಂಕ
ಮಾಡುವುದು ನಮ್ಮ ಸಂಪ್ರದಾಯಕ್ರಮವು. ನಮ್ಮ ಈ ಸಾಲಿಗ್ರಾ
ದೇವಸ್ಥಾನದಲ್ಲಿ ಲಕ್ಷ್ಮಿಯ ಮೂರ್ತಿಯು ಇರುವುದಿಲ್ಲ. ಆದ್ದರಿಂದ ಶ್ರೀ
ಲಕ್ಷ್ಮೀನೃಸಿಂಹ ಪ್ರೀತ್ಯರ್ಥಂ ಎಂಬುದು ನಮ್ಮ ಸಂಪ್ರದಾಯವಲ್ಲ. ಶ್ರೀ
ಗುರುನೃಸಿಂಹ ಜಯಂತಿ ದಿನ ಗುರುಸ್ಮರಣೆಗಾಗಿ ವಿವಾಹಾದಿ ಯಾ
ಶುಭಶೋಭನಾಕಾರ್ಯಗಳನ್ನು ನೆರವೇರಿಸುವುದಿಲ್ಲ.

ಎರಡನೆಯದಾಗಿ ಕೂಟ ಬ್ರಾಹ್ಮಣರೆಲ್ಲರೂ ಭಸ್ಮಧಾರಿಗಳೂ ಪಂಚಾ
ಯತನ ಪೂಜೆಯನ್ನು ಮಾಡುವವರೂ ಸ್ಮಾರ್ತ ಸಂಪ್ರದಾಯದವರೂ ಆ
ದ್ದಾರೆ. ಅವರು ಪಂಚಾಯತ ಪೂಜೆಯ ಮುಖ್ಯಾಂಗವಾದ ಆತ್ಮಾ
ರ್ಚನೆಯಲ್ಲಿ "ಸೋಹಂ ಭಾವೇನ ಪೂಜಯೇತ್" ಎಂಬ ಶ್ರುತಿವಚನವನ್ನು
ಪಠಿಸುವ ಅದ್ವೈತ ವೇದಾಂತಿಗಳಾಗಿರುವರು. ಅವರು ವೈಷ್ಣವರಲ್ಲ. ಅವರು
ಶೈವರಲ್ಲ. ಕೂಟ ಮಠಸ್ಥರು ವಿಷ್ಣು ಮತ್ತು ಶಿವ ಇವರಲ್ಲಿ ಪರಿಭೇ
ಮಾಡುವವರಲ್ಲ. ಯಾವ ದೇವರನ್ನೂ ತಾರತಮ್ಯ ನೀತಿಯಿಂದ ಭಾವಿಸ
"ಸೋಹಂ ಭಾವದಿಂದ" ಉಪಾಸಿಸುವ ಅದ್ವೈತ ವೇದಾಂತಿಗಳು. ಅವರು
ಸ್ವರ್ಗಕಾಮಿಗಳಾಗಿ ಯಜ್ಞಗಳಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುವ
ಮೀಮಾಂಸಕರಲ್ಲ.

ಅಹಿಚ್ಛತ್ರದಿಂದ ನಮ್ಮ ಸಾಲಿಗ್ರಾಮಕ್ಷೇತ್ರದ ಸಂದರ್ಶನಕ್ಕೆ ಬರಲು ಭಟ್ಟಾಚಾರ್ಯನನ್ನು ಪ್ರೇರೇಪಿಸಿ ಅನಂತರ ಈ ಕ್ಷೇತ್ರದಲ್ಲಿ ಲೋಕಾದಿತ್ಯ ರಾಜನಿಗೂ, ಭಟ್ಟಾಚಾರ್ಯನಿಗೂ ಮತ್ತು ಇತರ ಅನೇಕರಿಗೂ ಪ್ರತ್ಯಕ್ಷನಾಗಿ ಶ್ರೀ ಗಣಪತಿಯು "ಗಣಪತೇೀಮುಖ"— ಗಣಹೋಮವು ಕ್ಷಿಪ್ರವಾಗಿ ಸಿದ್ಧಿಸುವ ಮತ್ತು ಮೋಕ್ಷವನ್ನು ದೊರಕಿಸುವ ಸನ್ಮಾರ್ಗ ವೆಂದು ಬೋಧಿಸಿದ್ದರಿಂದ ಕೂಟ ಮಠಸ್ಥರು ಗಣಹೋಮಕ್ಕೆ ಪ್ರಾಶಸ್ತ್ಯ ವನ್ನು ಕೊಡುತ್ತಾರೆ. ಈ ಕಾರಣದಿಂದ ನಮ್ಮನ್ನು ಗಾಣಪತ್ಯರೆಂದು ಹೇಳಲು ಬರುವುದೇ? ಶ್ರೀ ಯೋಗಾನಂದ ನೃಸಿಂಹನನ್ನು ನಾವು ಗುರು ವಾಗಿ ಸ್ವೀಕರಿಸಿದ ಕಾರಣ ನಮ್ಮನ್ನು ವೈಷ್ಣವರೆಂದು ಕರೆಯಲು ಬರು ವುದೇ? ಕೂಟ ಮುನಿಪುಂಗವರು ಕೂಟವಾಸಿಗಳಾಗಿ ತಪಸ್ಸನ್ನಾಚರಿಸು ತ್ತಿದ್ದ ಈ ಮಹಾಕ್ಷೇತ್ರದಲ್ಲಿರುವ ಹಿರೇಮಾಲಿಂಗೇಶ್ವರ ದೇವಸ್ಥಾನವನ್ನು ನೋಡಿ ಅಥವಾ ನಾವು ಧರಿಸುವ ಭಸ್ಮರೇಖೆಗಳನ್ನು ನೋಡಿ ಕೂಟ ಮಠಸ್ಥರು ಶೈವರೆಂದು ಡಾಕ್ಟರ್ ಬಿ. ಎ. ಸಾಲೆತ್ತೂರರವರು ಮತ್ತು ಇತರರು ತಮ್ಮ ಗ್ರಂಥಗಳಲ್ಲಿ ಲಿಖಿಸಿರುವುದು ಅವರ ಅಜ್ಞಾನವನ್ನು ಪ್ರದರ್ಶಿಸುತ್ತದೆ.

ಕೊನೆಯದಾಗಿ ಕೂಟಮಠಸ್ಥರೆಲ್ಲರೂ ಆಶ್ವಲಾಯನ ಗೃಹ್ಯಸೂತ್ರ ವನ್ನು ಅನುಸರಿಸುವ ಋಗ್ವೇದಿಗಳಾಗಿರುವರು. ನಮ್ಮ ಪ್ರಯೋಗದ ವಿಧಿಯಂತೆ "ಇಮಾಂ ಕನ್ಯಾಂಪ್ರದಾಸ್ಯಾಮಿ ದೇವಾಗ್ನಿದ್ವಿಜಸನ್ನಿಧೌ"— ದೇವರು, ಅಗ್ನಿ ಮತ್ತು ದ್ವಿಜರ ಪರಿಮುಖ ಸಾಕ್ಷಿಯಾಗಿ ವಿವಾಹಾಂಗ ವಾದ ಪಾಣಿಗ್ರಹಣವು ನೆರವೇರತಕ್ಕದ್ದು. ಅಗ್ನಿಯನ್ನು ಆದಿಯಲ್ಲಿ ಪ್ರತಿಷ್ಠೆಮಾಡಿದ ನಂತರ, ಉದಕಕುಂಭಾದಿಗಳನ್ನು ಸ್ಥಾಪಿಸಿ ಆಜ್ಯಾ ಹುತಿಯನ್ನು ಹೋಮಿಸಿದ ನಂತರ ವರನು ಪೂರ್ವಮುಖವಾಗಿ ನಿಂತ ಮೇಲೆ, ವಿವಾಹಮಂಟಪವನ್ನು ಪ್ರವೇಶಿಸಿ ಪಶ್ಚಿಮಾಭಿಮುಖವಾಗಿ ನಿಂತ ವಧುವಿನ ಹೆಬ್ಬೆರಳನ್ನು ಹಿಡಿದು ಪಾಣಿಗ್ರಹಣ ಮಾಡುವ ವಿಧಾನವು ಆಶ್ವಲಾಯನ ಸೂತ್ರದಲ್ಲಿ ವಿಧಿಸಿರುತ್ತದೆ (1—7—3). ಜಲಸಾಕ್ಷಾದಿ ಕ್ರಮಗಳು ನಮ್ಮ ಸಂಪ್ರದಾಯವಲ್ಲ. ಇಂತಹ ಕ್ರಮವನ್ನು ಆಚರಿಸು ವುದು ಸರಿಯಲ್ಲ.

ಅನ್ಯ ಬ್ರಾಹ್ಮಣರ ಸಂಸರ್ಗ ವಿಚಾರಃ— ನಮ್ಮ ಜಿಲ್ಲೆಯ
ನೆಲಸಿರುವ ಅನ್ಯ ಬ್ರಾಹ್ಮಣರಲ್ಲಿ ನಮ್ಮ ಸಹಪಂಕ್ತಿಗೆ ಅರ್ಹರಾದ ಒಂ
ಬ್ರಾಹ್ಮಣವರ್ಗದವರೆಂದರೆ ಹವೀಕರು. ಪರಶುರಾಮನು ಸಮುದ್ರದಿ
ಪಡೆದು ಮಾಡಿದ ಏಳು ವಿಭಾಗಗಳಲ್ಲಿ ಹೈಗದೇಶವು ಒಂದಾಗಿದೆ.
ವಿಭಾಗವು ಉತ್ತರಕನ್ನಡ ಜಿಲ್ಲೆಯು ಭಟ್ಕಳದಿಂದ ಉತ್ತರಕ್ಕೆ ವ್ಯಾಪಿಸಿ
ಈ ಹೈಗ ಪ್ರದೇಶದಲ್ಲಿ ಭಟ್ಟಾಚಾರ್ಯನು ಹದಿನಾರು ಗ್ರಾಮಗಳ
ನಿರ್ಮಾಣಮಾಡಿ ಬ್ರಾಹ್ಮಣರನ್ನು ಸ್ಥಾಪಿಸಿದನು. ಇವರೇ ಹವಿ
ಬ್ರಾಹ್ಮಣರು. ಇವರಲ್ಲಿ ಹೆಗ್ಗಡೆ ಮೊದಲಾದ ಗೃಹಭೇದಗಳ
ಇವರೆಲ್ಲರೂ ಭಸ್ಮಧಾರಿಗಳು. ಇವರು ಆದಿಯಲ್ಲಿ ಶೈವರಾಗಿದ್ದರೆಂ
ತೋರುತ್ತದೆ. ಆ ಮೇಲೆ ಶ್ರೀಮಚ್ಛಂಕರಾಚಾರ್ಯರನ್ನು ಗುರುವಾ
ಸ್ವೀಕರಿಸಿ ಅದ್ವೈತಿಗಳಾದ್ದರಿಂದ ಇವರನ್ನು ಸ್ಮಾರ್ತಾಂತರಗತ ಶೈವರೆಂ
ಕರೆಯುವುದು ಸಾಧುವಾಗಿದೆ. ಇವರಲ್ಲಿ ಒಂದು ವರ್ಗದವರು ವಾಮ
ಮಾರ್ಗವನ್ನಾಚರಿಸುವ ಶಾಕ್ತೇಯರಾಗಿರುವರು. ಕೆಲವು ಶತಮಾನದಿಂ
ಇವರೆಲ್ಲರೂ ಈಗ ತೀರ್ಥಳ್ಳಿಯಲ್ಲಿ ಸ್ಥಾಪಿತವಾಗಿರುವ ಶ್ರೀ ರಾಮ
ಚಂದ್ರಾಪುರ ಮಠದ ಶಿಷ್ಯರಾಗಿರುವರು.

ಕೋಟೇಶ್ವರ ಬ್ರಾಹ್ಮಣರೆಂದು ಕರೆಯಲ್ಪಡುವವರು ಸಹ್ಯಾದ್ರಿ
ಉತ್ತರಖಂಡದಲ್ಲಿ ಪತಿತರೆಂದು ಹೇಳಿದೆ. ಕೂಟಗ್ರಾಮದಲ್ಲಿ ಉತ್ತ
ಗಡಿಯು ಕೋಟಿಲಿಂಗೇಶ ಎಂದು ಹೇಳಿರುವುದರಿಂದ ಕುಂಭಕಾಶಿ
ಕೋಟೇಶ್ವರ ಮೊದಲಾದ ಈಗಿನ ಗ್ರಾಮ ವಿಭಾಗಗಳಲ್ಲಿ ನೆಲಸಿದ್ದವರ
ಕೂಟಬ್ರಾಹ್ಮಣರ ಒಂದು ವರ್ಗವೇ ಆಗಿರಬೇಕು. ಆದರೆ ಸೀಮಾ
ವಿವಾದದಲ್ಲಿ ತಮ್ಮ ಸಾಧನೆಯನ್ನು ಬಲಪಡಿಸುವುದಕ್ಕಾಗಿ ಅಬ್ರಾಹ್ಮಣ
ಮಾರ್ಗವನ್ನು ಹಿಡಿದ ಕಾರಣದಿಂದ ಬಹಿಷ್ಕೃತರಾದರು. ಸಹ್ಯಾದ್ರಿಯು
ನಿರೂಪಿಸಿರುವ ಶೂದ್ರಾದಿ ಸ್ತ್ರೀಯರಲ್ಲಿ ಅಥವಾ ಪತಿತ ಸ್ತ್ರೀಯರಲ್ಲಿ ಜನಿ
ಪವರಲ್ಲವಾದ್ದರಿಂದ ದೀರ್ಘಕಾಲದ ಶಿಕ್ಷೆಯು ಉಚಿತವಲ್ಲವೆಂಬ ಭಾವ
ಯು ಬಂದಿರಬೇಕು. ಅನಂತರ ಇವರು ಸಹಪಂಕ್ತಿಗೆ ಪುನಃ ಸೇರಿ
ಲ್ಪಟ್ಟರು.

# 4

## ಕೂಟ ಬ್ರಾಹ್ಮಣರನ್ನು ಎದುರಿಸುವ ಕೆಲವು ಸಮಸ್ಯೆಗಳು

**ಶ್ರೇಷ್ಠರು ಯಾರು?** ತಮ್ಮ ತಮ್ಮ ಧರ್ಮಕರ್ಮಗಳನ್ನು ತಿಳಿದು ಆಚರಿಸುವುದು ತೀರ ಕಷ್ಟವಾಗಿರುವ ಈ ಕಾಲದಲ್ಲಿ ಯಾರೂ ಇತರರನ್ನು ತೆಗಳಿ ತಾವು ಶ್ರೇಷ್ಠರೆಂದು ಬಡಾಯಿಕೊಚ್ಚಿಕೊಳ್ಳುವ ಪ್ರಸಂಗಕ್ಕೆ ಕೈಹಾಕರು. ತಮ್ಮ ಸಂಪ್ರದಾಯದ ಮಹತ್ವವನ್ನು ತಿಳಿದುಕೊಂಡಿದ್ದರೆ ಮಾತ್ರ ಆ ಮಹತ್ವದ ಸ್ಥಿತಿಗೆ ಏರಲು ಸಾಧ್ಯವಾಗುವುದು. ಆದರೆ ಇತರರನ್ನು ತೆಗಳುವುದರಿಂದ ಮಾತ್ರ ಯಾರಿಗೂ ಉತ್ತಮ ಗತಿಯು ಪ್ರಾಪ್ತವಾಗಲಾರದು.

ಇತ್ತಲಾಗಿ ಬ್ರಾಹ್ಮಣರ ಕೂಟಗಳಲ್ಲಿ, ಅದರಲ್ಲೂ ಹೆಂಗಸರು ಸೇರಿದಾಗ, ಮಾಧ್ವ ಸಂಪ್ರದಾಯವೇ ಅತೀ ಮೇಲೆಂದು ಮಾಧ್ವರು ಬಡಾಯಿಕೊಚ್ಚಿಕೊಳ್ಳುವುದು ಮತ್ತು ತಮ್ಮ ವರ್ತನೆಗಳಿಂದ ಪ್ರದರ್ಶಿಸುವುದು ಕಾಣಬರುತ್ತಿದೆ. ಜಾತಿಭೇದ ವಿಚಾರಗಳಲ್ಲಿ ಶಾಸ್ತ್ರಗಳೇ ಆಧಾರವಲ್ಲದೆ ಬಡಾಯಿಮಾತುಗಳಲ್ಲ. ಮತ್ತು ತಮ್ಮ ಪಂಥದ ಅಧಿಕ ಸಂಖ್ಯಾಬಲ ಅಥವಾ ಸಂಪತ್ತು ಮೊದಲಾದವು ಎಂದೂ ಆಧಾರವಾಗಲಾರವು.

ಈ ವಿಚಾರದಲ್ಲಿ ಮಾಧ್ವ ಬ್ರಾಹ್ಮಣರ ಮೂಲವನ್ನು ವಿವೇಚಿಸುವ. ಮಾಧ್ವ ಬ್ರಾಹ್ಮಣರಲ್ಲಿ ಬಹು ಸಂಖ್ಯಾಕರು ಶಿವಬೆಳ್ಳಿ ಗ್ರಾಮದಲ್ಲಿ ನೆಲಸಿದ್ದ ನೂರಿಪ್ಪತ್ತು ಗೃಹಭೇದಗಳಲ್ಲಿ ಮಧ್ಯಮ ನಲ್ವತ್ತು ಮತ್ತು ಹೀನ ಎಪ್ಪತ್ತು ಗೃಹಭೇದಗಳಿಂದ ಬಂದಿರಬೇಕಷ್ಟೆ. ಮತ್ತು ಸಹ್ಯಾದ್ರಿ ಉತ್ತರ ಖಂಡದಲ್ಲಿ ಪತಿತರೆಂದು ಸ್ಪಷ್ಟೋಕ್ತಿಗಳಿಂದ ವಿವರಿಸುವ ಮಟ್ಟಿಮೊದಲಾದವರೂ ಸೇರಿರುವರು. ಅವರೆಲ್ಲರನ್ನು ಬೆರಸಿ ಮಾಧ್ವರೆಂಬ ನಾಮಕರಣ ಮಾಡಿದ ಮಾತ್ರಕ್ಕೆ ಶ್ರೇಷ್ಠರೆಂಬುದಕ್ಕೆ ಯಾವ ಶಾಸ್ತ್ರದ ಆಧಾರವಿದೆ? ಹತ್ತುಪಾಲು ಮಸಿಗೆ ಒಂದು ಪಾಲು ಜೇಡಿಯನ್ನು ಬೆರಸಿದರೆ,

ತಾನೀಗ ಜೇಡಿಗಿಂತ ಬೆಳ್ಳಗೆಂದು ಮುಸಿಯು ವಾದಿಸಿದಂತೆಯೇ ಸ
ಮಾಧ್ವ ಮತವನ್ನು ಸೇರಿದ ಮಾತ್ರದಿಂದ ಎಂತಹ ಹೀನ ಅಥ
ಪತಿತ ವರ್ಗದವರನ್ನು ಮೇಲಕ್ಕೆ ಏರಿಸುವ ಶಕ್ತಿ ಇದೆ ಎಂದು ಅ
ಭಾವನೆಯಿರುವುದಾದರೆ, ಮಾಧ್ವ ಮತವನ್ನು ಸ್ವೀಕರಿಸಿದ ಗೌಡಸಾ
ಸ್ವತರಿಗೆ ಉಡುಪಿ ಮಠಾಧೀಶರೂ, ಶಿವಳ್ಳಿ ಮಾಧ್ವ ಬ್ರಾಹ್ಮಣರ
ಏಕೆ ಸಹಪಂಕ್ತಿಯನ್ನು ಕೊಡುವುದಿಲ್ಲ? ಈ ಪ್ರಕಾರ ಅನ್ಯರನ
ಹೀಯಾಳಿಸಿ ತಾವು ಶ್ರೇಷ್ಠರೆಂಬ ಜಂಬಕೊಚ್ಚಿಕೊಳ್ಳುವುದಕ್ಕಿಂತ ತವ
ದೋಷಗಳನ್ನು ನೀಗುವ ಯತ್ನಮಾಡುವುದು ಶ್ರೇಯಸ್ಕರವು.

**ಮತ ಪರಿವರ್ತನೆ.** ಪ್ರಾಚೀನ ಕಾಲದಿಂದಲೂ ಭಾರತ ವರ್
ದಲ್ಲಿ ನೆಲಸಿದ್ದ ಬ್ರಾಹ್ಮಣರೆಲ್ಲರೂ ಭಸ್ಮಧಾರಿಗಳಾಗಿದ್ದರು. ಕೇದಾರದಿಂ
ರಾಮೇಶ್ವರ ಪರಿಯಂತ ಸಮಗ್ರ ಭಾರತದಲ್ಲಿ ಈಶ್ವರ ದೇವಸ್ಥಾನಗಳ
ಇದ್ದವು. ಪಂಚಾಯತನ ಪೂಜೆಯೇ ಎಲ್ಲರ ನಿತ್ಯ ಆಚರಣೆಯಾಗಿತ್ತು
ವಿಷ್ಣು ಮಾತ್ರ ಸರ್ವೋತ್ತಮ, ಶಿವ ಕೀಳು ಎಂಬ ದೇವರಲ್ಲಿನ ತಾರತಮ್ಯ
ಭಾವನೆ ಇರಲೇ ಇಲ್ಲ. ಪರಮಾತ್ಮನನ್ನು ಎಲ್ಲವರೂ ಒಂದೇ ಭಾ
ರೂಪದಿಂದ ಉಪಾಸಿಸಬೇಕೆಂಬ ಚಟವಿರಲಿಲ್ಲ. ಆದರೆ ವೈಷ್ಣವ ಸಂಪ್ರ
ದಾಯವು ತಲೆದೋರಿದ ನಂತರ ಮತಪರಿವರ್ತನೆಗೆ ಆರಂಭವಾಯಿತೆನ
ಬಹುದು. ಎಲ್ಲಾ ಪಂಥದವರಲ್ಲಿ ತಮ್ಮ ಸಂಖ್ಯೆಯನ್ನು ಹೆಚ್ಚಿಸು
ಉದ್ದೇಶವು ಬೆಳೆದುಬಂದಂತೆ ಕಾಣುತ್ತದೆ. ಅವರೆಲ್ಲರೂ ಮತಪರಿವರ್ತ
ನೆಗೆ ದುಮುಕಿದರು. ಕ್ರೈಸ್ತ ಮುಸಲ್ಮಾನ ಮೊದಲಾದವರಲ್ಲಿ ಈ
ಮತಾಂತರಗೊಳಿಸುವ ಚಟವು ಬಹಳ ಪ್ರಬಲವಾಗಿದೆ. ದ್ವೈತಿಗಳಾದ
ಮಾಧ್ವರಲ್ಲಿಯೂ, ವಿಶಿಷ್ಟಾದ್ವೈತಿಗಳಾದ ರಾಮಾನುಜ ಸಂಪ್ರದಾಯ
ದವರಲ್ಲಿಯೂ ಈ ಚಟವು ತುಂಬಾ ವ್ಯಕ್ತವಾಗುತ್ತದೆ. ಜನರನ್ನು ಮಾತ್ರವೆ
ಅಲ್ಲ ದೇವರನ್ನೇ ಪರಿವರ್ತನೆ ಮಾಡುವ ಚಟವು ಅನೇಕ ಕಡೆಗಳಲ್ಲಿ
ನಡೆದಿವೆ. ಕೆಲವು ನಿದರ್ಶನಗಳನ್ನು ಇಲ್ಲಿ ಸೂಚಿಸಲು ಬಯಸುತ್ತೇನೆ.

ಪರಶುರಾಮ ಕ್ಷೇತ್ರದಲ್ಲಿ ಏಳು ಪ್ರಸಿದ್ಧ ಕ್ಷೇತ್ರಗಳಿವೆ. ಅವುಗಳ
ವಿವರಣೆಯು ಈ ಪ್ರಕಾರ ಇದೆ.

ರೌಪ್ಯಪೀಠಂ ಕುಮಾರಾದ್ರಿಃ ಕುಂಭಕಾಶೀ ಧ್ವಜೇಶ್ವರಃ ।
ಕ್ರೋಡ ಗೋಕರ್ಣ ಮೂಕಾಂಬಾಃ ಸಪ್ತೈತಾ
ಮೋಕ್ಷದಾಯಿಕಾಃ ॥

1 ಶಿವಬೆಳ್ಳಿ ಗ್ರಾಮದ ಆರಾಧ್ಯದೇವಸ್ಥಾನವಾದ ಅನಂತೇಶ್ವರ. 2 ಕುಮಾರಧಾರ ನದಿಯ ತಟದಲ್ಲಿರುವ ಷಣ್ಮುಖನ ಶೇಷರೂಪವಾದ ಸುಬ್ರಹ್ಮಣ್ಯ. 3 ಕುಂಭೇಶ್ವರನನ್ನು ಸಂಹಾರ ಮಾಡಿ ಕುಂಭೇಶ್ವರನೆಂದು ಪ್ರಸಿದ್ಧವಾಗಿರುವ ಕುಂಭಕಾಶಿ. 4 ಗರ್ಭಗುಡಿಯಲ್ಲಿರುವ ಬಾವಿಯಲ್ಲಿ ಕೋಟಿಲಿಂಗಗಳಿರುವ ಧ್ವಜೇಶ್ವರ ಎಂಬ ಕೋಟೇಶ್ವರ. 5 ಕ್ರೋಡ ಮುನಿಗಳಿಂದ ವಿಖ್ಯಾತವಾದ ಮತ್ತು ಹರಿಹರ ಅಭೇದ ಪ್ರತೀಕವಾದ ಶಂಕರನಾರಾಯಣ. 6 ರಾವಣ ಪ್ರತಿಷ್ಠೆ ಎಂದು ವಿಖ್ಯಾತವಾದ ಮಹಾಬಲೇಶ್ವರ ಇರುವ ಗೋಕರ್ಣ ಮತ್ತು 7 ಸಹ್ಯಾದ್ರಿ ಪರ್ವತದ ಅತ್ಯಂತ ಉನ್ನತವಾದ ಕೊಡಚಾದ್ರಿಯ ಮೂಲದಲ್ಲಿ ಶಿವಶಕ್ತ್ಯಾತ್ಮಕವಾದ ಮೂಕಾಂಬಿಕಾ ದೇವಿ ನೆಲಸಿರುವ ಕೊಲ್ಲೂರು. ಇವು ಮೋಕ್ಷದಾಯಕ ಸಪ್ತಕ್ಷೇತ್ರಗಳಾಗಿವೆ.

ಇವುಗಳಲ್ಲಿ ಆದಿಯಲ್ಲಿ ಹೇಳಿದ ಅನಂತೇಶ್ವರನ ಸುತ್ತು ಇರುವ ಪ್ರದೇಶವೇ ಶಿವಬೆಳ್ಳಿ ಗ್ರಾಮ. ಭಟ್ಟಾಚಾರ್ಯನಿಂದ ಸ್ಥಾಪಿತರಾದ ಬ್ರಾಹ್ಮಣರೆಲ್ಲರೂ ಅನಂತೇಶ್ವರನ ಭಕ್ತರಾಗಿದ್ದರು. ಅವರು ಮಾಧ್ವರಾದ ಮೇಲೆ ಆ ದೇವಾಲಯದ ಬಸವನನ್ನೇ ಚಪಾಯಿಸಿರುವರು. ಈಗ ವೃಷಭ ಧ್ವಜದ ಬದಲು ಗರುಡ ಧ್ವಜವನ್ನು ಏರಿಸತೊಡಗಿದ್ದಾರೆ. ದೇವರ ಹೆಸರನ್ನು ಪರಿವರ್ತನೆ ಮಾಡಿ ಅನಂತಾಸನ ಎಂದು ಹೇಳತೊಡಗಿದ್ದಾರೆ. ಇಲ್ಲಿಂದ ಮೂರು ಮೈಲು ಪಶ್ಚಿಮದಲ್ಲಿ ವಡಪಾಂಡೇಶ್ವರ ಎಂಬ ಕ್ಷೇತ್ರವು ಸಮುದ್ರದ ಸಮೀಪದಲ್ಲಿದೆ. ಇಲ್ಲಿ ಪ್ರಸಿದ್ಧವಾಗಿರುವ ದೇವಾಲಯದಲ್ಲಿ ಪ್ರತಿಷ್ಠಿತ ದೇವರು ಸ್ಕಂದನಾಗಿರುತ್ತಾನೆ. ತಂತ್ರಸಮುಚ್ಚಯದಲ್ಲಿ ಹೇಳಿರುವ ಧ್ಯಾನ ಮಂತ್ರದಿಂದ ಈ ಸ್ಕಂದ ದೇವರ ಆರಾಧನೆ ಇಂದಿಗೂ ನಡೆಯುತ್ತಿದೆ. ಈ ದೇವರಿಗೆ ಮಯೂರವಾಹನ ಮತ್ತು ಕುಕ್ಕುಟಧ್ವಜವಿದೆ. ಆದರೂ ಮಾಧ್ವರು ಯಾತ್ರಿಕರು ಅಲ್ಲಿರುವುದು ಬಲರಾಮದೇವರೆಂದು ಹೇಳುತ್ತಾರೆ.

ಮೂರನೆ ಕ್ಷೇತ್ರವಾದ ಕುಂಭಕಾಶಿಯಲ್ಲಿ ಅರ್ಚಕವೃತ್ತಿಯು ಮಾ
ರಿಗೆ ಹೋದ ಮೇಲೆ ಅವರು ಕುಂಭೇಶ್ವರನ ಪ್ರಖ್ಯಾತಿ ಹೀನಗೊಳಿಸ
ಒಂದು ಕೃತಕ ಪುರಾಣವನ್ನು ರಚಿಸಿ ಭಕ್ತರಿಗೆ ಹೇಳುತ್ತಿದ್ದಾ
ಇನ್ನೊಂದು ದೇವಾಲಯದಲ್ಲಿ ಶಂಕರಾಚಾರ್ಯರ ಶಿಷ್ಯರಾದ ನ
ಜಿಲ್ಲೆಯಲ್ಲಿ ಜನ್ಮವೆತ್ತಿದ ಹಸ್ತಾಮಲಕರಿಂದ ಪ್ರತಿಷ್ಠಿತವಾದ ಮ
ಈಶ್ವರ ರೂಪವಾದ ದಕ್ಷಿಣಾ ಮೂರ್ತಿಯನ್ನು ಪಾಣಿಪೀಠದಿ
ಕಿತ್ತು ಗೋಪಾಲಕೃಷ್ಣನನ್ನು ಸ್ಥಾಪಿಸಬೇಕೆಂದು ಓರ್ವ ಮಾಧ್ವಪೀ
ಠೇಶ್ವರರು ಪ್ರಯತ್ನಮಾಡಿದರೂ ವಿಫಲವಾಯಿತಂತೆ. ಇನ್ನೊಂದೆಡೆಯ
ಸಿಂಹವಾಹಿನಿಯಾದ ದುರ್ಗಾದೇವಿಯನ್ನು ಮಹಾಲಕ್ಷ್ಮೀ ಎಂ
ಹೇಳುವ ಸಾಹಸಕ್ಕೂ ಹಿಂಜರಿಯುವುದಿಲ್ಲ. ಕೆಲವು ಈಶ್ವರಾಲಯಗಳ
ಸಂಪುಟ ಸಾಲಿಗ್ರಾಮವಿದೆಯೆಂದು ಸಮಾಧಾನ ಹೇಳುವ ಮಾಧ
ನೇಕರನ್ನು ನೋಡಬಹುದು.

ಈ ಮೊದಲಾದ ದೃಷ್ಟಾಂತಗಳಿಂದ ಒಂದು ವಿಚಾರವು ಕೂ
ಮತಸ್ಥರಾದ ನಮಗೆ ಬಹಳ ಸ್ಪಷ್ಟವಾಗಬೇಕಾಗಿದೆ. ಅದೇನೆಂದ
ನಮ್ಮ ಪೂರ್ವಿಕರು ಹಣದಾಸೆಗಾಗಿ ದೇವರ ಪೂಜಾದಿ ವೃತ್ತಿಯನ
ಮಾಡಬಾರದೆಂದು ನಿರ್ಧರಿಸಿ ಅನ್ಯವರ್ಗದವರನ್ನು ಅರ್ಚಕಾದಿ ವೃ
ಗಳಿಗೆ ನೇಮಿಸಿದಾಗ ಅವರ ಮುಂದೆ ಸ್ಮಾರ್ತ ಸಂಪ್ರದಾಯವನ್ನೇ ತ್ಯಜಿ
ಅನ್ಯ ಸಂಪ್ರದಾಯವನ್ನು ಸೇರಿಕೊಂಡು ಶೈವದ್ವೇಷಾದಿ ಅನರ್ಥಾಚಾ
ಗಳನ್ನು ಕೂಡ ಮಾಡಲು ಹಿಂಜರಿಯರೆಂದು ಸ್ವಪ್ನದಲ್ಲಿಯೂ ನೆ
ಸಿರಲಿಕ್ಕಿಲ್ಲ. ಶಿವಾಲಯಗಳಲ್ಲಿ ಭಸ್ಮವನ್ನು ಧರಿಸದೆ, ಈಶ್ವರನಿಗೆ ಅತ್ಯಂ
ಪ್ರಿಯವಾದ ಬಿಲ್ವಪತ್ರದ ಎಲೆಗಳನ್ನು ಅರ್ಪಿಸದೆ, ತುಳಸಿಯನ್ನು ಪ
ಸುವ ಅರ್ಚಕರನ್ನು ಶಿವಾಲಯಗಳಲ್ಲಿ ನಾವು ಕಾಣಬಹುದು. ಶಿವಾಲಂ
ಗಳಲ್ಲಿ ಆ ದೇವರಲ್ಲಿ ಭಕ್ತಿ ಹೆಚ್ಚಿಸುವುದರ ಬದಲು ಸತ್ಯನಾರಾಯ
ಪೂಜೆಯ ಬೋರ್ಡನ್ನೇ ಪ್ರಾಮುಖ್ಯವಾಗಿ ಇಟ್ಟು, ಇತರ ದೇವರುಗ
ಚಿತ್ರಗಳಿಗೆ ಪ್ರಾಮುಖ್ಯತೆ ಕೊಡುವುದನ್ನು ನೋಡಬಹುದು. ಪೌರೋಹಿ
ವೃತ್ತಿಯಲ್ಲಿಯೂ ಈ ಮಾತುಸಲ್ಲುವುದು. ಆದ್ದರಿಂದ ನಮ್ಮ ಸ್ವಧರ್ಮಾ
ಚಾರ ರಕ್ಷಣೆಗಾಗಿ ನಮ್ಮ ಪೂರ್ವಿಕರ ನಿರ್ಧಾರವನ್ನು ನಾವು ಪರಿವರ್ತಿ

ಸುವುದು ಅಗತ್ಯವಲ್ಲವೊ, ಎಂಬುದನ್ನು ಕೂಟ ಮಹಾಜಗತ್ತು ವಿಚಾರಿಸ ಬೇಕಾಗಿದೆ. ನಮ್ಮ ದೇವಸ್ಥಾನಗಳಲ್ಲಿ ವೃತ್ತಿಗಳಿಗೆ ನಿಯೋಜಿತರಾದವರು ಅನ್ಯ ಸಂಪ್ರದಾಯವನ್ನು ಅವಲಂಬಿಸಿದರೆ ಅವರಿಗೆ ದೇವಾಲಯದ ಆಗಮಾಚಾರಗಳನ್ನು ಬದಲಾಯಿಸುವರೆ ಯಾವ ಅಧಿಕಾರ ಅಥವಾ ಸ್ವಾತಂತ್ರ್ಯ ಇರುವುದಿಲ್ಲ. ನಮ್ಮ ಪೂರ್ವಾಚಾರ ಮತ್ತು ಶಾಸ್ತ್ರೀಯ ವಿವಾಹ ಕ್ರಮವನ್ನು ತ್ಯಜಿಸಿ ಸರಕಾರದವರು ರಚಿಸಿರುವ ವಿಶೇಷ ವಿವಾಹಾದಿ ಅಧಿನಿಯಮಗಳ ಆಧಾರವಾಗಿ (The Special Marriage Act etc.) ವಿವಾಹವಾಗುವವರು ತಮ್ಮ ಕುಟುಂಬದಿಂದ ವಿಚ್ಛೇದಿ ಸಲ್ಪಡುವ ಪರಿಣಾಮವನ್ನು ಈ ಅಧಿನಿಯಮಗಳು (ಆಕ್ಟುಗಳು) ವಿಧಿಸುತ್ತಿವೆ. ಅಂತವರು ತಮ್ಮ ವರ್ಣಾಶ್ರಮದಿಂದ ಭ್ರಷ್ಟರಾಗುವ ರೆಂಬುದು ಸ್ವತಃ ಸಿದ್ಧವಷ್ಟೆ! ಕ್ರೈಸ್ತಾದಿ ಪರಮತಗಳನ್ನು ಸೇರಿದವರು ತಮ್ಮ ಕುಟುಂಬದಿಂದ, ವರ್ಣಾಶ್ರಮ ಧರ್ಮಗಳಿಂದ ವಿಚ್ಛೇದಿತರು ಮತ್ತು ಭ್ರಷ್ಟರಾಗುತ್ತಾರೆ. ಇದೇ ರೀತಿಯಿಂದ ಆಗಮೋಕ್ತ ದೇವಾಲಯ ಗಳ ಅರ್ಚಕಾದಿ ವೃತ್ತಿಯವರು ಅನ್ಯಸಂಪ್ರದಾಯವನ್ನು ಅವಲಂಬಿಸಿದರೆ ಅಥವಾ ದ್ವೈಹಿತ್ರಿ ಅಧಿಕಾರದಿಂದ ಅನ್ಯ ಸಂಪ್ರದಾಯದವರಿಗೆ ಸೇರಿದರೆ, ಅವರ ಯಾವತ್ತೂ ಪೈತ್ರಿಕ ವೃತ್ತಿ, ಅಧಿಕಾರಗಳು ನಾಶವಾಗುವುದು ಸ್ವತಃ ಸಿದ್ಧವು. ಆದ್ದರಿಂದ ಕೂಟ ಮತಸ್ಥರು ಇಂತಹ ವೃತ್ತಿಯವರನ್ನು ನಿವೋಚಿಸಲು ಅಧಿನಿಯಮವನ್ನು ಕೂಡಲೇ ರಚಿಸಿ ಜಾರಿಗೆ ತರುವಂತೆ ಸರಕಾರವನ್ನು ಬಲವಂತಪಡಿಸುವುದು ಆದ್ಯ ಕರ್ತವ್ಯವಾಗಿದೆ. ಇಂತ ವರು ಮಾಡುವ ಭ್ರಷ್ಟಾಚಾರಗಳನ್ನು ನಿಲ್ಲಿಸುವಂತೆ ನಾವು ಎಲ್ಲರೂ ಪ್ರಯತ್ನಿಸಬೇಕು.

**ನಂಟಸ್ತಿಕೆ ವಿಚಾರ:** ಸಮಾನ ಕುಲ ಮತ್ತು ಗೋತ್ರದವರೊಡನೆ ಮಾತ್ರ ಕನ್ಯಾ ಸಂಬಂಧವನ್ನು ನಡೆಯಿಸಬೇಕೆಂದು ಸಹ್ಯಾದ್ರಿ ಖಂಡದಲ್ಲಿ ಹೇಳಿದೆ.

**ಸಮಾನ ಕುಲಗೋತ್ರಾಣಾಂ ಕನ್ಯಾ ಸಂಬಂಧಮಾಚರೇತ್.**

(ಸ.)

ನಂಟಸ್ಥಿಕೆ ವಿಚಾರದಲ್ಲಿ ಕುಲಕ್ಕೂ ಗೋತ್ರಕ್ಕೂ ಮಾತ್ರ
ಸಂಪ್ರದಾಯಕ್ಕೂ ಹೆಚ್ಚಿನ ಲಕ್ಷ್ಯವನ್ನಿಡಬೇಕಾಗಿದೆ. ಕಾರಣ ಸ್ಮಾ
ಸಂಪ್ರದಾಯಗಳಾದ ಅದ್ವೈತ ತತ್ವಕ್ಕೂ ಮಾಧ್ವರ ದ್ವೈತ ತತ್ವ
ಬಹಳ ಅಭ್ಯಂತರಗಳಿವೆ. ಇವೆರಡು ಪಂಥಗಳ ಮಾಧ್ಯಮ ಮಾ
ಅಥವಾ ನಡು ದಾರಿಯನ್ನು ವಿಶಿಷ್ಟಾದ್ವೈತವು ಹಿಡಿದಿದೆಯೆನ್ನಬಹು
ಆದರೂ ಸಾಮಾನ್ಯವಾಗಿ ಅದ್ವೈತಿಗಳಿಗೂ ವಿಶಿಷ್ಟಾದ್ವೈತಿಗಳಿಗೂ ಕಡಿ
ಭಿನ್ನಾಭಿಪ್ರಾಯಕ್ಕೆ ಇರುವುದಾದರೂ ಕನ್ಯಾ ಸಂಬಂಧಗಳು ನಡೆ
ವುದಿಲ್ಲ. ಅಂತೆಯೇ ವಿಶಿಷ್ಟಾದ್ವೈತಿಗಳಿಗೂ ಮತ್ತು ದ್ವೈತಿಗಳಿಗೂ ಕನ
ಸಂಬಂಧವು ನಡೆಯುವುದಿಲ್ಲ.

ಆದರೆ ಪ್ರಾಯಶಃ ನಾವೆಲ್ಲರೂ ಒಂದೇ ಮೂಲವಾದ ಅಹಿಚ್ಛ
ದಿಂದ ಬಂದವರೆಂಬ ಕಾರಣದಿಂದಲೇನೊ ನಮ್ಮಲ್ಲಿ ಮಾತ್ರ ದ್ವೈ
ಮತ್ತು ಅದ್ವೈತಿಗಳೊಳಗೆ ಕನ್ಯಾ ಸಂಬಂಧವು ನಿಷೇಧವಾಗಿರುವುದಿ
ಆದರೆ ನಮ್ಮ ಪೂರ್ವಿಕರು ಇಂತಹ ಸಂಬಂಧವನ್ನು ಇಷ್ಟಪ
ತ್ತಿರಲಿಲ್ಲ. ಇತ್ತಲಾಗಿ ಮಾತ್ರವೇ ಹೆಚ್ಚಾಗಿ ಇಂತಹ ನಂಟಸ್ಥಿ
ನಡೆಯತೊಡಗಿದೆ. ಸ್ಮಾರ್ತರು ಮತಾಂತರದ ಉದ್ದೇಶದಿಂ
ಇಂತಹ ಕನ್ಯಾಸಂಬಂಧವನ್ನು ನಡೆಯಿಸಿರುವುದಿಲ್ಲ. ಪತಿಧರ್ಮವ
ಪತ್ನಿಗೆ ಅನ್ವಯಿಸುವುದು. ಪತ್ನಿಯು ಪತಿಯ ಧರ್ಮಕ್ಕೆ ಅನುವರ್ತಿ
ಯಾಗಿರುವುದೇ ಪಾತಿವ್ರತ್ಯಧರ್ಮ ಎಂಬುದು ಸ್ತ್ರೀಯರ ದೃಢವಾ
ಭಾವನೆಯಾಗಿತ್ತು. ನಮ್ಮ ಸನಾತನ ಧರ್ಮವು ಇದನ್ನೇ ಉದ್ಘೋಷಿಸ
ತ್ತದೆ. ಆದರೆ ತಮ್ಮ ಮಾಧ್ವಮತ ಉತ್ತಮ, ತಮ್ಮ ಪಂಥಕ್ಕೆ ಪತಿಗಳನ
ಪರಿವರ್ತಿಸಲೇಬೇಕೆಂಬ ಮತಾಂತರ ಭಾವನೆಯು ಮಾಧ್ವ ಸ್ತ್ರೀಯ
ರಕ್ತದಲ್ಲಿ ತುಂಬಿದೆ. ಮತಾಂತರ ಮಾಡುವ ಮನೋಭಾವಕ್ಕೆ ತಮ
ವ್ಯಾಮೋಹಾಸ್ತ್ರವನ್ನು ಪ್ರಯೋಗಿಸಿ ಮಾಧ್ವ ಸಂಬಂಧವನ್ನು ಬೆಳೆಸಿ
ಮನೆಗಳನ್ನು ಮತಾಂತರ ಮಾಡಿರುವ ಅನೇಕ ನಿದರ್ಶನಗಳಿವೆ
ಆದ್ದರಿಂದ ಕನ್ಯಾಸಂಬಂಧವನ್ನು ಮಾಡುವಾಗ ಹಿಂದುಮುಂದೆ ವಿಚಾ
ಸದೆ ಪ್ರವರ್ತಿಸುವುದರಿಂದ ನಮ್ಮ ಸಂಪ್ರದಾಯಕ್ಕೆ ದಕ್ಕೆಬರುತ್ತಿದೆ
ಆದ್ದರಿಂದ ಈ ಬಲೆಯಿಂದ ಅತೀ ಪ್ರಾಚೀನ ಕಾಲದಿಂದಲೂ

ಬಂದಿರುವ ನಮ್ಮ ಸ್ಮಾರ್ತ ಸಂಪ್ರದಾಯವನ್ನು ಕಾಪಾಡುವುದು ನಮ್ಮ ಧರ್ಮ. ನಮ್ಮ ಸಂಪ್ರದಾಯವು ಇಂತಹ ತುಚ್ಛ ಕುಟಿಲ ಪ್ರಯೋಗಗಳಿಗೆ ಬಲಿಯಾಗದಂತೆ ನಾವು ಎಚ್ಚರದಿಂದ ಕನ್ಯಾ ಸಂಬಂಧಗಳನ್ನು ನಡೆಯಿಸಬೇಕಾಗಿದೆ.

**ಗೃಹನಾಮ ಪರಿವರ್ತನೆ.** ಕಾಲ ಮಹಿಮೆಯಿಂದ ನಮ್ಮ ಸಂಪ್ರದಾಯಕ್ಕೆ ಇನ್ನೊಂದು ಬಗೆಯ ದಕ್ಕೆ ಬರತೊಡಗಿದೆ. ಬ್ರಾಹ್ಮಣ್ಯದಲ್ಲಿ ವಿಶ್ವಾಸವಿಲ್ಲದ ಕೆಲವರು ತಮ್ಮ ವರ್ಣಾಶ್ರಮ ಧರ್ಮಕ್ಕೆ, ಯಜ್ಞೋಪವೀತಕ್ಕೆ, ತಿಲಾಂಜಲಿಯನ್ನು ಕೊಟ್ಟು ಅನ್ಯಜಾತಿ ಗೋತ್ರವಿಹೀನ ಸ್ತ್ರೀಯರಲ್ಲಿ ಅನುರಕ್ತರಾಗಿ ವಿಶೇಷವಿವಾಹಾದಿ ಅಧಿನಿಯಮಗಳ (ಅಕ್ಟುಗಳು) ಬೆಂಬಲಗಳ ಪ್ರಕಾರ ವಿವಾಹವಾಗುತ್ತಿದ್ದಾರೆ. ಆದರೆ ಅವರಿಗೆ ಮಯ್ಯ, ಹಂದೆ, ಕಾರಂತ ಮುಂತಾದ ಪವಿತ್ರ ಅಷ್ಟ ಗೃಹನಾಮಗಳಲ್ಲಿ ಇನ್ನೂ ವ್ಯಾಮೋಹವು ಕಟ್ಟಿಕೊಂಡಿರುವುದಲ್ಲದೆ ಆ ಹೆಸರುಗಳನ್ನು ತಮ್ಮ ಅನ್ಯಜಾತಿ ಮಕ್ಕಳಿಗೂ ಕೊಡುತ್ತಿದ್ದಾರೆ. ಇದಕ್ಕೂ ಪರಿಹಾರವಿದೆಯೋ ಎಂದು ಕೂಟ ಮಹಾಜಗತ್ತು ಆಲೋಚಿಸಬೇಕಾಗಿದೆ.

ಕೆಲವರು ತಮ್ಮ ಗೃಹನಾಮಗಳು ಅಪವಿತ್ರವೆಂದು ಭಾವಿಸಿಯೋ ಏನೋ, ತ್ಯಜಿಸಿ ರಾವ್ ಎಂದು ಕರೆದುಕೊಳ್ಳುತ್ತಿದ್ದಾರೆ. ರಾವ್ ಎಂಬ ನಾಮದಲ್ಲಿ ಏನು ಮಹಾ ವ್ಯಾಮೋಹ ಶಕ್ತಿ ಇದೆಯೋ ತಿಳಿಯದಾಗಿದೆ. ಇಂತವರಲ್ಲಿ ಅನೇಕರಿಗೆ ತಾವು ಯಾವ ಗೃಹಗೋತ್ರದವರು ಎಂದು ಸಹ ತಿಳಿದಿರುವುದಿಲ್ಲ. ಆದ್ದರಿಂದ ಈ ಕ್ರಮವನ್ನು ತ್ಯಜಿಸುವುದು ಉತ್ತಮವಲ್ಲವೆ? ಅಂತೂ ತಮ್ಮ ಮಕ್ಕಳಿಗಾದರೂ ತಮ್ಮ ಗೃಹಗೋತ್ರ ಏನೆಂದು ಕಲಿಸುವುದು ಅಗತ್ಯವಾಗಿದೆ.



# 5

# ಶ್ರೀ ಸಾಲಿಗ್ರಾಮ ಕ್ಷೇತ್ರ ಮಾಹಾತ್ಮ್ಯಂ

ನಮ್ಮ ಗುರುದೇವಸ್ಥಾನದ ಮಹಿಮೆಯನ್ನು ಪ್ರತಿಯೊಬ್ಬ ಕೂ
ಮತಸ್ಥನೂ ಅಗತ್ಯ ತಿಳಿದಿರಬೇಕಾದುದರಿಂದ ಇಲ್ಲಿ ಸಂಕ್ಷಿಪ್ತವಾ
ಕೊಟ್ಟಿದೆ.

ಗಜೇಂದ್ರಸ್ಯ ಮೃಗೇಂದ್ರಸ್ಯ ಮುಖಂ ಯಸ್ಯ ಮಹಾತ್ಮನಃ ।
ತದಧಃ ಪೌರುಷಂ ರೂಪಂ ಸದೇವಃ ಶುಭದೋಽಸ್ತುವ

( ಶ್ಲೋ ೧

ಯಾವ ಮಹಾತ್ಮನಿಗೆ ಗಜೇಂದ್ರನ ಮತ್ತು ಮೃಗೇಂದ್ರನ ಮುಖವ
ಕೆಳಗೆ ಮಾನವ ಶರೀರವೂ ಇದೆಯೋ ಆ ಪೌರುಷ ದೀಪ್ತಿರೂ
ದೇವರು ನಮ್ಮೆಲ್ಲರಿಗೆ ಶುಭವನ್ನು ಅನುಗ್ರಹಿಸಲಿ !

ಈ ದಿವ್ಯಶ್ಲೋಕದಿಂದ ಶ್ರೀಸಾಲಿಗ್ರಾಮ ಮಾಹಾತ್ಮ್ಯೆಯು ಆರಂ
ವಾಗಿದೆ. ಈ ಮಾಹಾತ್ಮ್ಯೆಯು ಪದ್ಮಪುರಾಣದ ಪುಷ್ಕರಖಂಡಾಂತರ್ಗ
ವಾಗಿದೆ.

ಋಷಯ ಊಚುಃ ।

ಸೂತ ಸರ್ವಪುರಾಣಜ್ಞ ರಕ್ಷಸ್ವಾಸ್ಮಾನ್ ಕೃಪಾನಿಧೇ ।
ಭಾರ್ಗವಸ್ವೀಕೃತೇಃ ಪೂರ್ವಮಿದಂ ಕ್ಷೇತ್ರಂ ಕಥಂ ಸ್ಥಿತಂ
ಕಥಂ ತೀರ್ಥಸ್ಥಲಾನ್ಯಾಸನ್ ನೃಸಿಂಹಃ ಕೇನ ಪೂಜಿತಃ
ಕೇನವಾಸಂ ಚ ಕಾರಾಸೌ ತತ್ಕಥಾಂ ಕಥಯಸ್ವನಃ ॥
ತದದ್ಭುತಂ ಮುನಿಪ್ರಶ್ನಂ ಶ್ರುಣ್ವನ್ ಸೂತಶ್ಚ ಸರ್ವವಿತ್ ॥
ಮನಸಾ ಸ್ವಗುರುಂ ಧ್ಯಾಂಸ್ತಸ್ಮೈ ಕುರ್ವನ್ನಮಸ್ಕೃತಿಂ

( ೨-೪

ಶ್ರೀಸಾಲಿಗ್ರಾಮ ಕ್ಷೇತ್ರಮಾಹಾತ್ಮ್ಯೆಯನ್ನು ಕೇಳುವ ಆತ
ತುರದಿಂದ ಮುನಿಪುಂಗವರು ಸರ್ವಧರ್ಮಪುರಾಣಗಳನ್ನು ತಿಳಿದವನ
ಸರ್ವ ಶಾಸ್ತ್ರಾರ್ಥಗಳ ಕೋವಿದನೂ, ಸಕಲ ಆಗಮಗಳ ರಹಸ್ಯವನ

ಅರಿತವನೂ ಮತ್ತು ಪುರಾಣಗಳನ್ನು ತಿಳಿದವರಲ್ಲಿ ಶ್ರೇಷ್ಠನೂ ಆಗಿರುವ ಸೂತಪುರಾಣಿಕನನ್ನು ಅಭಿವಂದಿಸಿ ಈ ಪ್ರಕಾರ ಪ್ರಾರ್ಥಿಸಿದರು. "ಕೃಪಾನಿಧಿ ಸೂತನೆ! ಸಕಲಪುರಾಣಗಳನ್ನು ತಿಳಿದವನಾದ ನೀನು ನಮ್ಮನ್ನು ರಕ್ಷಿಸಬೇಕು. ಪೂರ್ವದಲ್ಲಿ ಭಾರ್ಗವನು ಸಮುದ್ರರಾಜನಿಂದ ಪಡೆದ ಕ್ಷೇತ್ರವೆಲ್ಲಿದೆ? ಅದರಲ್ಲಿ ಯಾವ ಯಾವ ತೀರ್ಥಕ್ಷೇತ್ರಗಳಿವೆ? ಶ್ರೀ ನೃಸಿಂಹನು ಯಾರಿಂದ ಪೂಜಿತನು? ಯಾರು ಆ ಕ್ಷೇತ್ರವಾಸಿಗಳಾಗಿರುವರು? ಈ ದಿವ್ಯ ಕಥೆಯನ್ನು ನಮಗೆ ಹೇಳುವವನಾಗು." ಈ ಅದ್ಭುತವಾದ ಮುನಿವರ್ಯರ ಪ್ರಶ್ನೆಗಳನ್ನು ಕೇಳಿ, ಸರ್ವಜ್ಞನಾದ ಸೂತನು ಮನಸ್ಸಿನಲ್ಲಿ ತನ್ನ ಗುರುವರ್ಯನನ್ನು ಧ್ಯಾನಗೈದು ನಮಸ್ಕರಿಸಿದನು.

**ಸೂತ ಉವಾಚ !**

ಶೃಣುಧ್ವಮೃಷಯಃ ಸರ್ವೇಶ್ರದ್ಧಯಾ ಪರಯಾ ಯುತಾಃ ।
ಜಾಮದಗ್ನ್ಯಾಯ ರಾಮಾಯ ಮಹೀಖಂಡಂ ತದಾಜ್ಞಯಾ
ದತ್ತವಾನ್ ಸಿಂಧುರಾಜ್ಯೋಽಯಂ ನಮೋಸ್ತ್ವದ್ಭುತ
ಕರ್ಮಣೇ ( ೫ )

ವೀರಹಾ ಭಾರ್ಗವೋ ರಾಮೋ ಹಯಮೇಧಂ ಚಕಾರ ಸಃ ।
ತದ್ಧೋತ್ರೇ ಕಾಶ್ಯಪಾಯೇಽಯಂ ಭೂರ್ದತ್ತಾತೇನ
ಕಾಶ್ಯಪೀ ( ೬ )

ತಸ್ಮಾತ್ ಸ್ಥಲಂಚ ಸಂಪ್ರಾಪ್ಯ ಚಕಾರಕ್ಷೇತ್ರಮುತ್ತಮಂ ।
ಭಾರ್ಗವಕ್ಷೇತ್ರಸಂಜ್ಞಂ ತಮಿತಿ ವೇದವಿದೋಜನಾಃ ( ೭ )
ತಸ್ಮಿನ್ ಪುಣ್ಯಸ್ಥಲಂ ತೀರ್ಥಂ ಸೇವಿತಂ ತನ್ಮಹಾತ್ಮಭಿಃ ।
ದೇವರ್ಷಿಮಾನವೈ ಸಿದ್ಧೈಃ ಸಾಧ್ಯೈಃ ಕಿಂಪುರುಷಾದಿಭಿಃ ( ೮ )
ದೇವರ್ಷಿನಾರದ ಸ್ತತ್ರತ್ ಸ್ಥಲೇಗತ್ವಾ ತಪಶ್ಚರನ್ ।
ಸಹ್ಯ ಜಾತಾಂ ನದೀಂ ಪಶ್ಯನ್ ಪಂಚಗಂಗಾವಲೀಲ
ಯಯೌ ( ೯ )

ತದ್ಯುಕ್ತಾಂಬು ನಿಧೌಸ್ನಾತಃ ಕೋಟೀಶ್ವರಂ ಭವಂ ಶಿವಂ
ಅರ್ಚಯನ್ ಕುಂಭಕಾಶ್ಯಾಂ ಸ ಮುನಿರ್ಹರಿಹರಪ್ರತೀ( ೧೦ )

ಅನಂತರ ಸೂತನು, "ಋಷಿಗಳೆ! ನೀವೆಲ್ಲರೂ ಬಹು ಶ್ರದ್ಧಾಯು ರಾಗಿ ಈ ಮಹಾತ್ಮ್ಯೆಯನ್ನು ಕೇಳುವವರಾಗಿರಿ. ಪೂರ್ವದಲ್ಲಿ ಎಂ ತ್ರೇತಾಯುಗದಲ್ಲಿ ಮಹಾ ಪರಾಕ್ರಮಿಯಾದ ಭಾರ್ಗವ ರಾಮನು ಅ ಮೇಧ ಯಜ್ಞವನ್ನು ಮಾಡಿ, ಆ ಯಜ್ಞದಲ್ಲಿ ಹೋತೃವಾದ ಕಶ್ಯಪ ಸರ್ವಭೂಮಿಯನ್ನು ದಾನವಾಗಿತ್ತನು. ಅನಂತರ ಜಾಮದಗ್ನಿ ರಾ ನಿಗೆ ಅವನ ಆಜ್ಞೆಯ ಪ್ರಕಾರ ಸಾಗರರಾಜನು ಮಹಾಭೂಖಂಡವ ಕೊಟ್ಟನು. ಈ ಅದ್ಭುತ ಕಾರ್ಯಕ್ಕೆ ನಮಸ್ಕಾರವಿರಲಿ. ಆ ಭೂಖಂ ವನ್ನು ಪಡೆದು ಪರಶುರಾಮನು ಅದನ್ನು ಉತ್ತಮ ಕ್ಷೇತ್ರವಾಗಿ ನಿರ್ಮ ದನು. ಆದ್ದರಿಂದ ಈ ಸ್ಥಳವು ಭಾರ್ಗವಕ್ಷೇತ್ರ–ಪರಶುರಾಮಕ್ಷೇತ್ರ ಎಂಬುದಾಗಿ ವೇದವಿತ್ತರಾದ ಜನರಿಂದ ತಿಳಿಯಲ್ಪಟ್ಟಿದೆ. ಅದರಲ್ಲಿರು ತೀರ್ಥಕ್ಷೇತ್ರಗಳು ಮಹಾತ್ಮರಿಂದಲೂ, ದೇವರ್ಷಿಗಳಿಂದಲೂ, ಮಾನ ರಿಂದಲೂ, ಸಿದ್ಧ, ಸಾಧ್ಯ ಮತ್ತು ಕಿಂಪುರುಷರಿಂದಲೂ ಸೇವಿಸಲ್ಪಟ್ಟಿವ ದೇವರ್ಷಿಯಾದ ನಾರದನು ಈ ಎಲ್ಲಾ ತೀರ್ಥಕ್ಷೇತ್ರಗಳಿಗೆ ಹೋಗಿ ಅಲ್ಲಿ ತಪಸ್ಸನ್ನಾಚರಿಸುತ್ತ, ಸಹ್ಯಾದ್ರಿ ಪರ್ವತದಲ್ಲಿ ಉದ್ಭವಿಸಿರುವ ಪಂ ಗಂಗಾವಳಿಯನ್ನು ಅವಲೋಕಿಸಿ ಆಕರ್ಷಿತನಾಗಿ, ಆ ನದಿಯ ಸಂಗವ ಸ್ಥಾನದಲ್ಲಿ ಸ್ನಾನವನ್ನು ಮಾಡಿದನು. ಆ ಮೇಲೆ ದಕ್ಷಿಣಾಭಿಮುಖವಾ ಪ್ರವಾಸಬೆಳೆಯಿಸಿ, ಕೋಟಿಲಿಂಗೇಶ್ವರನನ್ನು ಪೂಜಿಸಿ, ಹರಿಹರಪ್ರೀ ಎಂದರೆ ವಿಷ್ಣು ಮತ್ತು ಶಿವ ಇವರಿಬ್ಬರ ಭಕ್ತಾಗ್ರಣಿಯಾದ ನಾರದನ ಕುಂಭೇಶ್ವರನನ್ನು ಅರ್ಚಿಸಿದನು.

**ಯತ್‌ಕ್ಷೇತ್ರಂ ವಾಮತಃ (ನ್ಯಾಯತಃ) ಸೀತಾನದೀ ತನ್ಮ**
**ವರ್ತಿನೀ**
**ಯಸ್ಮಿನ್ ಚಕ್ರುಸ್ತಪಃ ಕೂಟಂ ಮುನಯಃ ಕೂಟವಾಸಿನಃ**
**( ೧೧**
**ತತ್ಕೂಟಾಖ್ಯೆ ಮಹಾಕ್ಷೇತ್ರೇತಾನ್ ಮುನೀನ್ ಕುರ್ವತಸ್ತಪಃ**
**ದೇವರ್ಷಿನಾರದಃ ಪಶ್ಯನ್ ಸ ಸ್ವಯಂ ತಪ್ತವಾಂಸ್ತಪಃ ( ೧೨**

ನಂತರ ಈ ಕುಂಭಕಾಶೀ ಕ್ಷೇತ್ರದಿಂದ ದಕ್ಷಿಣಕ್ಕೆ ಸೀತಾನದಿಯ ವರೆಗೆ ವ್ಯಾಪಿಸಿರುವ ಪ್ರದೇಶದ ಮಧ್ಯದಲ್ಲಿ ಕೂಟಮುನಿಪುಂಗವರು ಕೂ

ವಾಸಿಗಳಾಗಿ ತಪಸ್ಸನ್ನಾಚರಿಸುತ್ತಿದ್ದ ಪ್ರಸಿದ್ಧವಾದ ಕೂಟ ಎಂಬ ಹೆಸರಿನ ಮಹಾಕ್ಷೇತ್ರವನ್ನು ನಾರದನು ಸಂದರ್ಶಿಸಿದನು. ಅಲ್ಲಿ ಅನೇಕ ಮುನಿಗಳು ತಪ ಗೈಯುವುದನ್ನು ನೋಡಿ, ನಾರದನು ಕೆಲವುಕಾಲಪರ್ಯಂತ ತಪಸ್ಸನ್ನಾಚರಿಸಿದನು.

ತತ್‌ಕ್ಷೇತ್ರ ಮಧ್ಯತಸ್ತಸ್ಮಿನ್ ದೇವರ್ಷೌ ತಪಸಿ ಸ್ಥಿತೇ ।
ಸಾಚಚಾಲಚಲಾ ಕೃತ್ಸ್ನಾ ಪರ್ವತಾಸ್ತೇ ಚಕಂಪಿರೇ ( ೧೩ )
ಕ್ಷುಭಿತೋ ದೃಶ್ಯತೇ ಸಿಂಧುರ್ವಾಯುರಾಶ್ರಮ ಭಂಜನಃ ।
ಧಾವಂತಿ ತೇಮೃಗಾ ಭ್ರಾಂತಾಃ ಪಕ್ಷಿಣೋ ಲೇಭಿರೇ
ಭ್ರಮಂ ( ೧೪ )
ಋಷಯೋ ಭ್ರಾಂತ ಚಿತ್ತಾಸ್ತು ಜಗ್ಮುರತ್ಯಾಹಿತಂಪರೇ ।
ದೇವರ್ಷೇರ್ ನಾರದಾತ್ ಕ್ಷೇಮಂ ಪ್ರಾಪ್ತುಂ ತಂ
ಶರಣಂ ಯಯೌ ( ೧೫ )
ಧ್ಯಾಯಂತಂ ಮನಸಾ ದೇವಂ ನೃಹರಿಂ ತ್ರಿಗುಣಾತ್ಮಕಂ ।
ಮಹರ್ಷೇ ತ್ರಾಹಿ ನಃ ಸರ್ವಾನ್ ಭಯಾದಿತಿ
ಚತುಷ್ಟ್ರವುಃ ( ೧೬ )
ತಸ್ಮಿನ್ ಕಾಲೇಶ್ರುತಾ ವಾಣೀ ದಿವ್ಯಾಸರ್ವಾತಿ ಹಾರಿಣೀ ।
ಪಾಪಘ್ನಂ ಸಾಪುರಾಣ ಶ್ರೀ ನೃಸಿಂಹಂ ವೇತ್ತಿಪಾವನಂ
(ದಾಯಿನೀಂ ೧೭ )

ಆಗ ಮಹರ್ಷಿ ನಾರದನು ತಪಗೈದ ಸ್ಥಳದ ಮಧ್ಯ ಭಾಗದಿಂದ ಭಯಂಕರವಾದ ಒಂದು ಶಬ್ದವು ಕೇಳಿಸಿತು. ಪರ್ವತಗಳು ಕಂಪಿಸಿದವು. ಸಮುದ್ರವು ಕ್ಷೋಭೆಗೊಂಡಿತು. ವಾಯುವಿನ ಉತ್ಪಾತದಿಂದ ಋಷಿಗಳ ಆಶ್ರಮವು ಮುರಿದು ಬೀಳುವಂತಾಯಿತು. ಮೃಗಗಳೆಲ್ಲಾ ಚೆದರಿ ಊರೆಲ್ಲಾ ಓಡಿದವು. ಪಕ್ಷಿಗಳು ದಿಗ್ಭ್ರಮೆಗೊಂಡು ಚಕ್ರದಂತೆ ತಿರುಗುತ್ತಿದ್ದುವು. ಋಷಿಗಳೆಲ್ಲಾ ಭ್ರಾಂತಚಿತ್ತರಾದರು. ಉಳಿದವರೆಲ್ಲರೂ ಆಪತ್ತಿಗೀಡಾದರು. ದೇವರ್ಷಿ ನಾರದನಿಂದ ರಕ್ಷಣೆಯನ್ನು ಪಡೆಯಬೇಕೆಂದು ಆ ಋಷಿಗಳೆಲ್ಲರೂ, ತ್ರಿಗುಣಾತ್ಮಕನಾದ ಶ್ರೀ ನೃಹರಿಯನ್ನು ಧ್ಯಾನಿಸುತ್ತಿದ್ದ ನಾರದನು ಇರುವಲ್ಲಿಗೆ ಬಂದು, "ಮಹರ್ಷಿಯೆ! ಭಯ

ಗ್ರಸ್ಥರಾದ ನಮ್ಮೆಲ್ಲರನ್ನು ಕಾಪಾಡು" ಎಂದು ಮೊರೆಯಿಟ್ಟರು. ಆ
ಸರ್ವರ ಸಂಕಷ್ಟವನ್ನು ಪರಿಹರಿಸುವಂತಹ ಒಂದು ದಿವ್ಯವಾಣಿಯ
ಕೇಳಿತು. ಆ ವಾಣಿಯು ಪಾಪಹರನೂ ಪಾವನ ಮೂರ್ತಿಯೂ ಆ
ಪುರಾಣ ಪ್ರಸಿದ್ಧ ಶ್ರೀ ನೃಸಿಂಹನ ವಿಚಾರವನ್ನು ಬೋಧಿಸಿತು.

ಚತುರ್ದಶತಲಂ ಯಸ್ಯ ಕುಕ್ಷೌ ತಚ್ಛಿಲಯಾಕೃತಂ।
ಯೋಗಾನಂದ ನೃಸಿಂಹಾಖ್ಯಂ ಬ್ರಹ್ಮರುದ್ರಾದಿ
ಪೂಜಿತಂ (೧೮

ಬಾಹು ದ್ವಯುಲಸಚ್ಚಕ್ರ ಶಂಖತೀರ್ಥಾಂತರ ಸ್ಥಿತಂ।
ತ್ರಿಮೂರ್ತಿಮಯ ಬೋಧಿದ್ರುಮಧ್ಯಗಂ ಭುಕ್ತಿ
ಮುಕ್ತಿದಂ (೧೯

ತತ್ಪ್ರತಿಷ್ಠಾಕಲಾಪಾದಿ ನಾರದಸ್ತತ್ಕರಿಷ್ಯತಿ।
ಶಾಲಗ್ರಾಮ ಶಿಲಾರೂಪೀ ನೃಸಿಂಹಃ ಸರ್ವರಕ್ಷಕಃ (೨೦
ದಿವ್ಯವಾಣೀ ವಚಃ ಶ್ರುತ್ವಾ ಋಷಯೋ ಹರ್ಷಸಂಯುತಾಃ
ಚಕ್ರುರ್ನಮಸ್ಕೃತಿಂ ತಸ್ಮೈ ನಾರದಾಯ ಮಹರ್ಷಯೇ
(೨೧)

ಆ ವಾಣಿಯು ಈ ಪ್ರಕಾರ ನುಡಿಯಿತು. "ಹದಿನಾಲ್ಕು ಲೋಕ ಗಳನ್ನು ತನ್ನ ಕಂಕುಳಲ್ಲಿ ಇಟ್ಟುಕೊಂಡಿರುವ ಯೋಗಾನಂದ ಶ್ರೀ ನೃಸಿಂಹ ಎಂಬ ಹೆಸರಿನ ಶಿಲಾಕೃತವಾಗಿರುವ ಬ್ರಹ್ಮರುದ್ರಾದಿ ದೇವತೆಗಳಿಂದ ಪೂಜಿಸಲ್ಪಡುವ, ಶಂಖ ಚಕ್ರಗಳನ್ನು ಧರಿಸಿದ ಎರಡು ಬಾಹುಗಳಿಂ ಶೋಭಿಸುವ, ಶಂಖ ಚಕ್ರಗಳೆಂಬ ಎರಡು ತೀರ್ಥಗಳ ನಡುವೆ ಶೋಭಿ ಸುವ, ತ್ರಿಮೂರ್ತಿರೂಪವಾದ ಅಶ್ವಸ್ಥ ವೃಕ್ಷದ ಮಧ್ಯದಲ್ಲಿ ಭೋಗ ಮೋಕ್ಷಗಳೆರಡನ್ನು ಅನುಗ್ರಹಿಸುವ ಒಂದು ದಿವ್ಯಮಂಗಲ ಮೂರ್ತಿ ಇದೆ. ಅದು ಸರ್ವರಕ್ಷಕ ಸಾಲಿಗ್ರಾಮ ಶಿಲಾರೂಪಿ ಶ್ರೀ ನೃಸಿಂಹ ಮೂರ್ತಿಯಾಗಿರುತ್ತದೆ. ಅದರ ಪ್ರತಿಷ್ಠಾದಿಕಾರ್ಯಗಳನ್ನು ನಾರದನು ಮಾಡುವನು." ಈ ದಿವ್ಯವಾಣಿಯನ್ನು ಕೇಳಿ ಆ ಋಷಿಗಳೆಲ್ಲರೂ ಹರ್ಷಿತರಾದರು. ಆ ಮಹರ್ಷಿಯಾದ ನಾರದನನ್ನು ಅವರೆಲ್ಲರೂ ನಮಸ್ಕರಿಸಿದರು.

ತಪಸಿ ಧ್ಯಾನದೃಷ್ಟ್ಯೋಽಯ ಮರ್ಥೋಽಸೌ ಯುಕ್ತಕಾಲಿಕಃ
ಯದುಕ್ತಂ ದಿವ್ಯವಾಣ್ಯಾ ತತ್ತಥ್ಯಮಿತ್ಯಾಹತಾನ್ಮುನೀನ್
( ೨೨ )

ಸ ನಾರದಪ್ತನ್ಮುನಿ ಕೂಟಯುಕ್ತೋ
ಬೋಧಿದ್ರುಮಸ್ಥಂ ನೃಹರಿಂ ನನಾಮ ।
ಬೋಧಿದ್ರುಮಾದಿವರ ಭೂಧನಾದಿ
ಯೋಗೀ ನೃಸಿಂಹೋ ಧೃತ ಶಂಖ ಚಕ್ರಃ ॥ ( ೨೩ )
ವೇದಾಗಮೋಕ್ತೈರ್ವಿಧಿಭಿರ್ವಿಧಿಜ್ಞೋ
ಯಸ್ಯ ಪ್ರತಿಷ್ಠಾಂ ಕೃತವಾನ್ ಮಹರ್ಷಿಃ ।
ಕೂಟಸ್ಥಲೇಽಸ್ಮಿನ್ ಸ್ವಕರಸ್ಥಚಕ್ರ
ಶಂಖದ್ವಯಾ ದರ್ಶಿತ ಪಾರ್ಶ್ವತೀರ್ಥಃ ॥ ( ೨೪ )

ನಾರದನು ಆ ಮುನಿವರ್ಯರ ಕುರಿತು "ದಿವ್ಯವಾಣಿ ಹೇಳಿದ ಮಾತು ಸತ್ಯವಾಗಿದೆ. ನಾನು ಧ್ಯಾನನಿಷ್ಠನಾಗಿದ್ದಾಗ ಈ ವಿಚಾರವು ನನಗೆ ಗೋಚರವಾಗಿತ್ತು. ಯುಕ್ತಕಾಲದಲ್ಲಿ ಈ ವಾಣಿಯು ಕೇಳಿತು" ಎಂದನು. ಆ ಮೇಲೆ ನಾರದನು ಆ ಮುನಿಪುಂಗವರೊಡನೆ ಆ ಅಶ್ವತ್ಥಮರದಲ್ಲಿದ್ದ ಶ್ರೀನೃಸಿಂಹ ಮೂರ್ತಿಯನ್ನು ವಂದಿಸಿದನು. ಶಂಕಚಕ್ರಧಾರಿಯಾದ ಅನಾದಿಯೋಗಿ ಶ್ರೀನೃಸಿಂಹನು ಆ ವೃಕ್ಷದಲ್ಲಿ ಆವಿರ್ಭವಿಸಿದನು. (ಬಹಳ ಪುರಾತನ ಕಾಲದಿಂದಲೂ ದೇವಸ್ಥಾನದ ಆ ಒಂದು ಅಶ್ವತ್ಥ ಮರಕ್ಕೆ ತಸ್ತೀಕು ಇತ್ತು.) ವೇದಾಗಮೋಕ್ತ ವಿಧಿಗಳನುಸಾರವಾಗಿ ವಿಧಿಜ್ಞನಾದ ನಾರದನು ಶ್ರೀನೃಸಿಂಹನನ್ನು ಪ್ರತಿಷ್ಠೆಮಾಡಿದನು. ಈ ಕೂಟಸ್ಥಳದಲ್ಲಿ ತನ್ನೆರಡು ಕೈಗಳಲ್ಲಿ ಪ್ರದರ್ಶಿಸುತ್ತಿದ್ದ ಶಂಖಚಕ್ರಗಳೇ ಎಡಬಲಪಾರ್ಶ್ವದಲ್ಲಿರುವ ಶಂಕತೀರ್ಥ ಮತ್ತು ಚಕ್ರತೀರ್ಥಗಳಾಗಿ ಶ್ರೀ ನೃಸಿಂಹನು ನೆಲಸಿದನು.

ಮಂತ್ರರಾಜೋಕ್ತ ಮಾರ್ಗೇಣ ನಾರದೇನ ಮಹಾತ್ಮನಾ ।
ಪೂಜಿತೋ ನೃಹರಿಃ ಸಾಕ್ಷಾದಸಕ್ಷಾನ್ಮೂರ್ತಿರುದ್ಬಭೌ ( ೨೫ )

ಸಾಮಾನ್ಯರಿಗೆ ಅಗೋಚರನಾಗಿರುವ ಶ್ರೀ ನರಹರಿಯು ಮಂತ್ರ ರಾಜದಲ್ಲಿ ಹೇಳಿದ ಮಾರ್ಗಪ್ರಕಾರ ಮಹಾತ್ಮನಾದ ನಾರದನಿಂದ

ಪೂಜಿತನಾಗಿ ಸಾಕ್ಷಾತ್ ಶ್ರೀನೃಸಿಂಹನೇ ಪ್ರತ್ಯಕ್ಷನಾಗಿ ಆವಿರ್ಭವಿಸಿದನು. ಆ ದಿವ್ಯಮಂಗಲ ಮೂರ್ತಿಯ ದರ್ಶನ ಮಾತ್ರದಿಂದ ಆ ಮುನಿಪುಂಗರೆಲ್ಲರೂ ಮೌನವನ್ನು ತಾಳಿದರು. ಪರಮ ಸಂತುಷ್ಟನಾದ ನಾರದನು ಈ ಎರಡು ದಿವ್ಯ ಗೀತಗಳಿಂದ ಶ್ರೀನೃಹರಿಯನ್ನು ಸ್ತುತಿಸಿದನು.

ತನ್ಮೂರ್ತಿ ದರ್ಶನಾತ್ಸರ್ವೇ ಮುನಯೋ ಮೌನತಾಂಗತಾಃ
ನಾರದಃ ಪರಮಸ್ತುಷ್ಟಸ್ತುಷ್ಟಾವ ನೃಹರಿಂ ಹರಿಂ (೨೬

ನಾರದ ಉವಾಚ

ಮುಕುಂದ ಕೃಷ್ಣಾಚ್ಯುತ ಶಂಖಪಾಣೇ
ದಾಮೋದರಾನಂತ ರಥಾಂಗಪಾಣೇ ।
ವೈಕುಂಠ ನಾರಾಯಣ ಶಾರ್ಙ್ಗಪಾಣೇ
ವಿಷ್ಣೋ ಮುರಾರೇನೃಹರೇ ನಮಸ್ತೇ ॥ ( ೨೭ )
ಲಕ್ಷ್ಮೀಕಲತ್ರ! ಪ್ರಿಯ ಕಾಮಪುತ್ರ!
ಕ್ಷೋಣೀ ಕಲತ್ರ ದ್ವಿಜರಾಜಪುತ್ರ ।
ಸುತ್ರಾಮ ಮಿತ್ರ ಪ್ರಿಯ ಸಚ್ಚರಿತ್ರ
ತ್ರಿವಿಕ್ರಮ ಶ್ರೀನೃಹರೇ ನಮಸ್ತೇ ॥ ( ೨೮ )

ಹೇ ಮುಕುಂದ! ಕೃಷ್ಣ, ಅಚ್ಯುತ, ಶಂಖಪಾಣೇ, ದಾಮೋದರ, ಅನಂತ, ರಥಾಂಗಪಾಣೇ, ವೈಕುಂಠವಾಸಿ ನಾರಾಯಣ, ಶಾರ್ಙ್ಗಪಾಣೇ, ಮುರಾರಿ, ನೃಹರಿಯೆ ನಿನಗೆ ನಮಸ್ಕಾರವು.

ಲಕ್ಷ್ಮೀಪತಿಯೆ! ಮನುಮಥನೇ ಪುತ್ರನಾಗಿರುವವನೆ! ಭೂದೇವಿಯೇ ಪತ್ನಿಯಾಗಿರುವವನೆ! ಗರುಡನೇ ವಾಹನನಾಗಿರುವವನೇ! ದೇವೇಂದ್ರನು ಮಿತ್ರನಾಗಿರುವವನೆ! ಪ್ರಿಯ ಸಚ್ಚರಿತ್ರನೇ! ತ್ರಿವಿಕ್ರಮ ಸ್ವರೂಪಿಯೇ! ಶ್ರೀ ನೃಹರಿಯೇ ನಿನಗೆ ನಮಸ್ಕಾರವು".

ಸ್ತುತ್ಯಾ ಮಹತ್ಯಾ ಮುನಿವರ್ಯಗೀತ್ಯಾ
ಶ್ರುತ್ಯೇವ (ಶುತ್ಯೈವ) ತುಷ್ಟೋಽಸ್ಮಿವರಂ ವೃಣೀಷ್ವ ।
ವದನ್ಮಹರ್ಷೇಃ ಪುರತಃ ಸ್ವಮೂರ್ತ್ಯಾ
ನೃಸಿಂಹರೂಪೋ ಹರಿರಾವಿರಾಸೀತ್ ( ೨೯ )

ನಾರದ ಉವಾಚ

ಸ್ವಾಮಿನ್ ಜಗನ್ನಾಥ ವರಂಪ್ರದೇಹಿ
ಕೂಟಸ್ಥಲೇಽಸ್ಮಿನ್ ವಸತಾಂ ಜನಾನಾಂ ।
ನಿಶ್ರೇಯಸೇ ಶಂಖಜ ತೀರ್ಥಚಕ್ರೇ
ದಧತ್ಸ್ವಮೂರ್ತೌ (ವಸ ಚಂದ್ರತಾರಕಂ) ಚವಸ್ಯೆಂದು ತಾರಂ ( ೩೦ )

. ಈ ದಿವ್ಯ ಶ್ಲೋಕಗಳಿಂದ ನಾರದನು ಸ್ತೋತ್ರಮಾಡುತ್ತಿರುವಾಗ ನೃಸಿಂಹರೂಪನಾದ ಹರಿಯು ಆ ವಿಗ್ರಹದಿಂದ ಆವಿರ್ಭವಿಸಿ "ಮುನಿ ಶ್ರೇಷ್ಠನೇ! ನಿನ್ನ ಸ್ತುತಿಗೀತೆಯನ್ನು ಕೇಳಿ ಸಂತುಷ್ಟನಾಗಿ ನಿನಗೆ ವರವನ್ನು ಅನುಗ್ರಹಿಸಿರುವೆನು. ನಿನ್ನ ಅಭಿಷ್ಟವಾದ ವರವನ್ನು ಕೇಳು" ಎಂದು ನುಡಿದನು.

ನಾರದನು "ಸ್ವಾಮಿನ್ ಜಗನ್ನಾಥ! ಈ ಕೂಟಸ್ಥಲದಲ್ಲಿ ನೆಲಸಿರುವ ಜನರಿಗೆಲ್ಲಾ ಶ್ರೇಯಸ್ಸನ್ನು ಅನುಗ್ರಹಿಸುವುದಕ್ಕಾಗಿ, ಶಂಖ ಮತ್ತು ಚಕ್ರ ಎಂಬೀ ಎರಡು ತೀರ್ಥಗಳಲ್ಲಿ ಮತ್ತು ಈ ದಿವ್ಯ ಮೂರ್ತಿಯಲ್ಲಿ ಆಚಂದ್ರಾರ್ಕವಾಗಿ ನೀನು ನೆಲಸಿರುವವನಾಗು. ಇದೇ ನಾನು ಕೇಳುವ ವರವು" ಎಂದು ವಿಜ್ಞಾಪಿಸಿದನು.

ತಥೇತಿ ದೇವೋ ನೃಹರಿಃ ಸ್ವಮೂರ್ತಾ
ವಂತರ್ಬಹಿಃ ಶಾಶ್ವತ ವಾಸಮಾಪ ।
ತಾವತ್ ಸ್ಥಲೇಽಸ್ಮಿನ್ ಘನಪುಷ್ಪವೃಷ್ಟಿ
ಸ್ತೃಪ್ತಂ ಸದೇವರ್ಷಿಗಣಂ ಚಗಚ್ಚ (ತ್ಯಾಂ) ( ೩೧ )
ದೇವದುಂದುಭಯೋ ನೇದುರ್ಗಂಧರ್ವಾಸ್ತೇ ಕಲಂಜಗುಃ ।
ನನೃತು (ನನರ್ತು) ಶ್ಚಾಪ್ಸರೋ ಮುಖ್ಯಾ ಹರ್ಷಪೂರ್ಣಂ ಜಗದ್ಬಭೌ ( ೩೨ )

"ಹಾಗೆಯೇ ಆಗಲಿ" ಎಂದು ಹೇಳಿ ಶ್ರೀನೃಹರಿಯು ಆ ಸುಮೂರ್ತದಲ್ಲಿ ಆ ವಿಗ್ರಹದ ಒಳಗೂ ಹೊರಗೂ ಶಾಶ್ವತವಾಗಿ ವಾಸಮಾಡಿದನು. ಆ ಸ್ಥಳದಲ್ಲಿ ಘನ ಪುಷ್ಪವೃಷ್ಟಿ ಸುರಿಯಿತು. ದೇವರ್ಷಿಗಣವು ಮತ್ತು ಜಗತ್ತು ಸಂತೃಪ್ತಿಗೊಂಡಿತು. ದೇವದುಂದುಭಿಗಳು ಮೊಳಗಿದವು.

ಕೂಟಕ್ಷೇತ್ರಾಂತರೇ ಯಸ್ಮಿನ್ ಶಾಲಗ್ರಾಮ ಶಿಲಾತ್ಮನಾ ।
ವ್ಯಕ್ತೀ ಭೂತೋ ನೃಸಿಂಹ ಸ್ತಚ್ಛಾಲಗ್ರಾಮ ಸ್ಥಲಂ ವಿದುಃ
( ೩೩

ಶಾಲಗ್ರಾಮ ಶಿಲಾಮೂರ್ತಿರ್ದರ್ಶನಂ ಸರ್ವಸಿದ್ಧಿದಂ
ಯಚ್ಚಕ್ರ ತೀರ್ಥೇಸ್ನಾತಾನಾಂ ರೋಗಾರಿಭಯ ನಾಶನಂ
( ೩೪

ತಚ್ಛಂಖ ತೀರ್ಥತಃ ಸ್ನಾನಂ ಬ್ರಹ್ಮಹತ್ಯಾದಿನಾಶನಂ ।
ತಸ್ಮಾತ್ತೀರ್ಥದ್ವಯೇ ಸ್ನಾತೋ ಯಃ ಕೂರ್ಯಾತ್ಪೂ
ಜನಂ ಹರೇ
ಪುತ್ರಪೌತ್ರಾದಿಭಿರ್ಯುಕ್ತೋ ಲಭತೇ ವಾಂಛಿತಂ ಫಲಂ
( ೩೫ )

ಈ ಕೂಟಕ್ಷೇತ್ರದ ಮಧ್ಯದಲ್ಲಿ ಸಾಲಿಗ್ರಾಮ ಶಿಲಾರೂಪಿಯಾದ ಶ್ರೀನೃಸಿಂಹನು ವ್ಯಕ್ತಿಭೂತನಾಗಿ ಪ್ರಕಟಗೊಂಡಿರುವುದರಿಂದ ಈ ಸ್ಥಳವನ್ನು ಸಾಲಿಗ್ರಾಮವೆಂದು ಕರೆಯುತ್ತಾರೆ. ಈ ಸಾಲಿಗ್ರಾಮ ಶಿಲಾಮೂರ್ತಿಯ ದರ್ಶನವು ಸರ್ವಸಿದ್ಧಿಯನ್ನು ಕೊಡುತ್ತದೆ. ಚಕ್ರತೀರ್ಥದಲ್ಲಿ ಸ್ನಾನಮಾಡಿದರೆ, ಸರ್ವರೋಗಶತ್ರುಭಯಗಳು ನಾಶವಾಗುವವು. ಶಂಖತೀರ್ಥದಲ್ಲಿ ಸ್ನಾನಮಾಡಿದರೆ, ಬ್ರಹ್ಮಹತ್ಯಾದಿ ಪಾಪಗಳು ಪರಿಹರಿಸಲ್ಪಡುವುವು. ಆದ್ದರಿಂದ ಈ ಎರಡೂ ತೀರ್ಥಗಳಲ್ಲಿ ಸ್ನಾನಮಾಡಿ, ಶ್ರೀನೃಸಿಂಹನನ್ನು ಪೂಜೆಮಾಡುವವರು ಮಕ್ಕಳು ಮತ್ತು ಮೊಮ್ಮಕ್ಕಳ ಸಹಿತ ಇಷ್ಟಾರ್ಥವನ್ನು ಪಡೆಯುವರು.

೨

ಪರಮೇಶ್ವರ ಶಕ್ತಿಯಿಂದ ಉಂಟಾದ ಕದಂಬ ವಂಶದಲ್ಲಿ ವಸು ಎಂಬ ನೃಪನಿದ್ದನು. ಅವನ ಮಗಳಾದ ಸುಶೀಲೆಯನ್ನು ರವಿವಂಶ ಸಂಭವನಾದ ಹೇಮಾಂಗದನು ವಿವಾಹವಾದನು. ಸುಶೀಲೆಯಲ್ಲಿ ಪಿತಾರಿಷ್ಟಕನಾದ ಮಯೂರ ವರ್ಮನೆಂಬ ಮಗನು ಹುಟ್ಟಿದನು. ಚಂದ್ರಾಂಗದ ರಾಜನು ಶತ್ರುವಿನಿಂದ ಹತನಾದನು. ಸುಶೀಲೆ ಮಗುವಿನೊಡನೆ

ರಾತ್ರಿಕಾಲ ಪುರದಿಂದ ಹೊರಟುಹೋದಳು. ಕಾಲಕ್ರಮದಲ್ಲಿ ಮಯೂರ ವರ್ಮನು ತೇಜಸ್ವಿಯಾಗಿ ರಾಜ್ಯವನ್ನು ಪಡೆದನು.

ಮಯೂರವರ್ಮನು ಕಶ್ಯಪರ ಆಜ್ಞೆಯಂತೆ ತನ್ನ ರಾಜ್ಯದಲ್ಲಿ ಬ್ರಾಹ್ಮಣರನ್ನು ಸ್ಥಾಪಿಸುವುದಕ್ಕಾಗಿ ಅಹಿಚ್ಛತ್ರಕ್ಕೆ ಹೋದನು. ತನ್ನ ರಾಜ್ಯದಲ್ಲಿ ವೇದಜ್ಞ ಬ್ರಾಹ್ಮಣರನ್ನು ಸ್ಥಾಪಿಸುವ ರಾಜನ ಇಷ್ಟಾರ್ಥವನ್ನು ತಿಳಿದು ಬ್ರಾಹ್ಮಣರು ರಾಜನೊಡನೆ ಬಂದರು. ರಾಜನು ಯೋಗ್ಯ ಮರ್ಯಾದೆಯನ್ನು ಕೊಟ್ಟು ಮೂವತ್ತೆರಡು ಗ್ರಾಮಗಳಲ್ಲಿ ಆ ಬ್ರಾಹ್ಮಣ ರನ್ನು ನೆಲಸಿದನು. ಹತ್ತು ವರ್ಷಕಾಲ ಕಳೆದ ಮೇಲೆ ರಾಜನಿಗೆ ಪಿತ್ರಾರಿಷ್ಟಕಾರಕನಾದ ಚಂದ್ರಾಂಗದನೆಂಬ ಮಗನು ಹುಟ್ಟಿದನು. ರಾಜ್ಯ ವನ್ನು ಮಂತ್ರಿ ವಶಕೊಟ್ಟು ಮಯೂರವರ್ಮನು ತಪಸ್ಸನ್ನಾಚರಿಸಲು ಹೊರಟು ಹೋದನು. ಮಂತ್ರಿಯ ಕಾಲದಲ್ಲಿ ಉಪೇಕ್ಷಿತರಾಗಿ ಬ್ರಾಹ್ಮಣರು ಅಹಿಚ್ಛತ್ರಕ್ಕೆ ಹಿಂತಿರುಗಿದರು. ಚಂದ್ರಾಂಗನು ಪ್ರಾಪ್ತ ವಯಸ್ಕನಾದ ಮೇಲೆ ಪಟ್ಟಾಭಿಷಿಕ್ತನಾಗಿ ಆ ಬ್ರಾಹ್ಮಣರನ್ನು ಪುನಃ ಕರತಂದು ನೆಲ ಸಿದನು.

ಚಂದ್ರಾಂಗದನಿಗೆ ಲೋಕಾದಿತ್ಯನೆಂಬ ಅರಿಷ್ಟಕಾರಕ ಪುತ್ರನು ಹುಟ್ಟಿದನು. ಹುಬ್ಬಾಸಿಕನೆಂಬ ದುಷ್ಟನು ರಾಜ್ಯವನ್ನು ವಶಪಡಿಸಿ ಕೊಂಡು ಜನರನ್ನು ಪೀಡಿಸತೊಡಗಿದನು. ಇದನ್ನು ಸಹಿಸಲಾರದೆ ಹೆಚ್ಚಿನ ಬ್ರಾಹ್ಮಣರು ಪುನಃ ಅಹಿಚ್ಛತ್ರಕ್ಕೆ ಮರಳಿದರು. ಉಳಿದವರು ಹುಬ್ಬಾಸಿಕನ ಅನುವರ್ತಿಯಾಗಿ ಆಚಾರಗೆಟ್ಟು ಬಾಳಿದರು. ಕೆಲವು ವರ್ಷಗಳ ನಂತರ ಲೋಕಾದಿತ್ಯನು ಗೋರಾಷ್ಟ್ರ ರಾಜನಾದ ಚಂಡ ಸೇನನ ತಂಗಿಯಾದ ಕನಕಾವತಿಯನ್ನು ವಿವಾಹವಾದನು. ಬಾವನ ಸಹಾಯದಿಂದ ಶತ್ರುವಾದ ಚಂಡಸೇನ ಮತ್ತು ಅವನ ಪರಿವಾರವನ್ನು ಲೋಕಾದಿತ್ಯನು ಯುದ್ಧದಲ್ಲಿ ಸಂಹರಿಸಿ, ರಾಜ್ಯವನ್ನು ತಿರುಗಿ ಪಡೆದನು. ಆದರೆ ರಾಜ್ಯವು ಅಬ್ರಾಹ್ಮಣ್ಯವಾಗಿದ್ದುದನ್ನು ನೋಡಿ ಬ್ರಾಹ್ಮಣರನ್ನು ಕರತರುವುದಕ್ಕೆ ಲೋಕಾದಿತ್ಯನು ಅಹಿಚ್ಛತ್ರಕ್ಕೆ ಹೋಗಿ, ಜಗತ್ಪೂಜ್ಯನೂ ಗುರುವರ್ಯನೂ ಆಗಿದ್ದ ಭಟ್ಟಾಚಾರ್ಯನನ್ನು ಆರು ತಿಂಗಳು ಕಾಲ ಸೇವೆಗೈದನು.

ಸಾಕ್ಷಾತ್ಮಧಿವಾನಸ್ಮಿ ವರದೋಽಸ್ಮಿ ವರಂ ವೃಣೆ ।
ಯಸ್ಮಿನ್ ಸ್ಥಲೇ ಗಜಃ ಸಿಂಹೋ ನಿರ್ವೈರೋಽಭೇದತಾಂಗ
( ೩೬

ಲೋಕಾದಿತ್ಯೇನ ಭಕ್ತೇನ ತತ್‌ಸ್ಥಲಂ ಗಚ್ಛಮಾಮುಕಂ ।
ಇತಿ ಭಟ್ಟಃ ಸ್ವಯಂ ಸ್ವಪ್ನೇ ಕಥಾ ಗಣಪತೀರಿತಾಂ ( ೩೭
ಭಟಃ ಸ ತೇಭ್ಯೋ ದ್ವಿಜಪುಂಗವೇಭ್ಯೋ
ದತ್ವಾಗ್ರಹಾರಾನ್ ಕ್ಷಿತಿಪೇನ ಪಶ್ಯನ್ ।
ತತ್ ಸ್ವಪ್ನ ದೃಷ್ಟಸ್ಥಲ ದರ್ಶನೇಚ್ಛು
ಗುರುರ್ಬಭೂವ ಕ್ಷಿತಿಪಸ್ಯತಸ್ಯ ( ೩೮

ಆ ಸಮಯ ಒಂದು ರಾತ್ರಿ ವಿಪ್ರಾಗ್ರಣಿಯಾದ ಭಟ್ಟಾಚಾರ್ಯನ ಒಂದು ದಿವ್ಯಸ್ವಪ್ನವನ್ನು ಕಂಡನು. ಸ್ವಪ್ನದಲ್ಲಿ ಗಜಾನನು ಪ್ರತ್ಯಕ್ಷನಾಗಿ ಈ ಪ್ರಕಾರ ಸಂಬೋಧಿಸಿದನು. "ವಿಪ್ರಶ್ರೇಷ್ಠನೆ! ಯಾವ ಸ್ಥಳದಲ್ಲಿ ಗಜ (ಆನೆ) ಮತ್ತು ಮೃಗೇಂದ್ರ (ಸಿಂಹ) ಇವು ನಿರ್ವೈರ ಮತ್ತು ಅಭೇದ ರಾಗಿ ನೆಲಸಿರುವುವೋ ಆ ನನ್ನ ಕ್ಷೇತ್ರಕ್ಕೆ ನೀನು ಲೋಕಾದಿತ್ಯ ಭಕ್ತ ನೊಡನೆ ಹೋಗು. ನಾನೇ ಸ್ವತಃ ನುಡಿಯುತ್ತಿದ್ದೇನೆ". ಮರುದಿನ ಭಟ್ಟಾ ಚಾರ್ಯನು ಬ್ರಾಹ್ಮಣರೊಡಗೂಡಿ ಲೋಕಾದಿತ್ಯ ರಾಜನನ್ನು ಸಂದರ್ಶಿಸಿ ಆತನ ವಾಂಛಿತಾರ್ಥವನ್ನು ಪೂರೈಸುವುದಾಗಿ ನುಡಿದನು. ಈ ಅಭಯ ವಚನವನ್ನು ಕೇಳಿ ರಾಜನು ಸಂತುಷ್ಟನಾಗಿ ಬ್ರಾಹ್ಮಣರಿಂದ ತನ್ನ ಕದಂಬ ರಾಜ್ಯವನ್ನು ತುಂಬಿಸಬೇಕೆಂದು ಪ್ರಾರ್ಥಿಸಿದನು. ಭಟ್ಟಾ ಚಾರ್ಯನು ಇದಕ್ಕೆ ಸಮ್ಮತಿಸಿದನು. ಕೂಡಲೇ ಲೋಕಾದಿತ್ಯನು ಗುರುವರ್ಯ ಭಟ್ಟಾಚಾರ್ಯನ ನೇತೃತ್ವದಲ್ಲಿ ವಿಪ್ರಸಂಕುಲವನ್ನು ಕರ ಕೊಂಡು ಬಂದು ವಿವಿಧ ಗ್ರಾಮಗಳಲ್ಲಿ ಅತಿರಾತ್ರ, ಪುಂಡರೀಕ ಮೊದ ಲಾದ ಯಜ್ಞಯಾಗಗಳನ್ನು ನೆರವೇರಿಸಿ ವಿವಿಧಗೃಹ ಭೇದಗಳನ್ನು ಕಲ್ಪಿಸಿ ಆ ಬ್ರಾಹ್ಮಣರನ್ನು ಸ್ಥಾಪಿಸಿದನು. ರಾಜನು ದಾನವಿತ್ತ ಭೂಮಿ ಮೊದ ಲಾದ ಮರ್ಯಾದೆ ಮತ್ತು ಸರ್ವಶೋಭಸ್ಕರಯುಕ್ತವಾದ ಅಗ್ರಹಾರ ಗಳನ್ನು ನೋಡಿ ದ್ವಿಜವರ್ಯರೆಲ್ಲರೂ ಸಂತುಷ್ಟರಾದರು. ತನ್ನ ವಾಂಛಿತಾ ರ್ಥವು ಪರಿಪೂರ್ಣ ನೆರವೇರಿತೆಂದು ರಾಜನು ಶಾಂತಚಿತ್ತನಾದನು.

ಇತ್ತ ಭಟ್ಟಾಚಾರ್ಯನು ಸ್ವಪ್ನದಲ್ಲಿ ಕೇಳಿದ ನುಡಿಯಂತೆ ಗಜಾನನು ನೆಲಸಿರುವ ಆ ಪವಿತ್ರಕ್ಷೇತ್ರ ಯಾವುದೆಂದು ದರ್ಶನಕಾಂಕ್ಷಿಯಾಗಿ ಸಂಚಾರಿಸುತ್ತಿದ್ದನು.

ಜಟಾಧರಃ ಶಾಂತರೂಪೋ ನಿರ್ವೈರ ಸ್ಥಲ ವೀರ್ಯತಃ ।
ಸಿಂಹಪೂರ್ವಮುಖಂ ಸ್ವಸ್ಯ ಪಾಶ್ಚಾತ್ಯಂ ಗಜವೀಕ್ಷತೇ
(೩೯)

ಧನ್ಯೋ ವಸತಿ ಯೋ ದೇವಃ ಸರ್ವೇಷಾಮಿಷ್ಟಸಿದ್ಧಿದಃ ।
ತಸ್ಯಾವಿರ್ಭಾವ ಕಾಲೋಽಯಮಿತಿ ಶಂಸಂತಿ ಪೂರ್ವತಾಃ
(೪೦)

ಇತಿ ಮಂತ್ರಿವಚಃ ಶೃಣ್ವನ್ ರಾಜಾ ಭಟ್ಟೇನ ಚೋದಿತಃ ।
ಸಭಟ್ಟ ಪರಿವಾರೋಽಸೌ ಸಾಲಗ್ರಾಮಸ್ಥಲಂ ಯಯೌ ।
ತಸ್ಮಿನ್ ಪುಣ್ಯಾನಿ ತೀರ್ಥಾನಿ ವಿವಿಧಾನಿ ಸ್ಥಲಾನಿ ಸಃ (೪೧)
ಸೇವಯನ್ ಅರ್ಜಿತೋ ಭಕ್ತ್ಯಾ ನೃಹರೇರ್ದರ್ಶನೋತ್ಸುಕಃ
ಪೂರ್ಣ ಕುಂಭಂ ಗೃಹೀತಾರ್ಘ್ಯೈರ್ ನೃಹರೇಃ
ಪುರಮಾಯಯೌ (೪೨)

"ಜಟಾಧಾರಿಯಾಗಿ ಶಾಂತಸ್ವರೂಪನಾಗಿ ಸಿಂಹವು ಪೂರ್ವವನ್ನು, ಗಜನು ಪಶ್ಚಿಮವನ್ನು ನೋಡುತ್ತಿರುವ ಮತ್ತು ಇಷ್ಟಾರ್ಥವನ್ನು ಕೊಡುವ ನಿರ್ವೈರ್ಯಸ್ಥಳವು ಶ್ರೀ ಸಾಲಿಗ್ರಾಮ ಕ್ಷೇತ್ರವು. ಇದು ಕದಂಬ ರಾಜರಿಂದ ಪರಿಪೂಜಿತ ಕ್ಷೇತ್ರವು" ಎಂದು ಮಂತ್ರಿಯಿಂದ ಭಟ್ಟಾಚಾರ್ಯನು ತಿಳಿದನು. ಈ ದಿವ್ಯಕ್ಷೇತ್ರದ ಸಂದರ್ಶನವು ಪುಣ್ಯಪ್ರದಾಯಕವೆಂದು ರಾಜನನ್ನು ಭಟ್ಟಾಚಾರ್ಯನು ಪ್ರೇರೇಪಿಸಿದನು. ರಾಜನು ಅದಕ್ಕೆ ಸಮ್ಮತಿಸಿ, ಭಟ್ಟಾಚಾರ್ಯ ಮತ್ತು ಸೇವಕರೊಡನೆ ಶ್ರೀ ಸಾಲಗ್ರಾಮ ಕ್ಷೇತ್ರ ಸಂದರ್ಶನಕ್ಕಾಗಿ ಹೊರಟನು. ಮಾರ್ಗದಲ್ಲಿರುವ ನಾನಾ ಪುಣ್ಯತೀರ್ಥಗಳನ್ನೂ ಪವಿತ್ರ ಸ್ಥಳಗಳನ್ನೂ ಸೇವಿಸುತ್ತ ಮತ್ತು ಭಕ್ತಿಯಿಂದ ಅರ್ಚಿಸುತ್ತ ಪ್ರಜೆಗಳಿಂದ ಪೂಜಿತನಾದ ಲೋಕಾದಿತ್ಯ ರಾಜನು ಪೂರ್ಣ ಕುಂಭ, ಅರ್ಘ್ಯ ಮೊದಲಾದವುಗಳ ಸಹಿತ ಶ್ರೀ ನೃಸಿಂಹ ದರ್ಶನೋತ್ಸುಕನಾಗಿ ಸಾಲಗ್ರಾಮ ಕ್ಷೇತ್ರವನ್ನು ಸೇರಿದನು.

ರಾಜನು ಶಾಸ್ತ್ರವಿಧಿ ಪ್ರಕಾರ ಶ್ರೀ ನೃಸಿಂಹನನ್ನು ಪೂಜಿಸಿದನ
ಶ್ರೀ ನೃಹರಿಯು ರಾಜನ ಪೂಜೆಯಿಂದ ಸಂತುಷ್ಟನಾಗಿ ಅವನ ಮನೆ
ರಥವನ್ನು ಕರುಣಿಸಿದನು. ಅಲ್ಲಿ ನೆರೆದಿದ್ದ ಬ್ರಾಹ್ಮಣರಿಗೆಲ್ಲಾ ವ
ರತ್ನಾದಿಗಳನ್ನೂ, ದಕ್ಷಿಣೆಯನ್ನೂ ರಾಜನು ಕೊಟ್ಟನು. ಆ ವಿಪ್ರ
ಸಂತೃಪ್ತರಾಗಿ ಈ ದಿವ್ಯಶ್ಲೋಕದಿಂದ ಶ್ರೀ ನೃಸಿಂಹನನ್ನು ಸ್ತುತಿಸಿದರ

ಸಾಕ್ಷಾದ್ಬ್ರಹ್ಮ ಹರೀಶ ಚಿಹ್ನವಪುಷಾ (ಷೇ) ದೀಪ್ತತ್ರಿ
ಮೂರ್ತ್ಯಾತ್ಮನೆ
ನಿರ್ವೈರಸ್ಥಲ ವೀರ್ಯದೃಷ್ಟ ಮುಖತಃ ಸಿಂಹ
ದ್ವಿಪಾಸ್ಯಶ್ರೀಯೇ (೪೩
ಕಂಠಾಧಃ ಸ್ಫುಟ ದೃಶ್ಯಮಾನ ನೃಶರೀರೈಕ್ಯಾಯ
ಸರ್ವಾತ್ಮನೇ
ಲೋಕಾನುಗ್ರಹ ವಸ್ತುನೇಽಸ್ತು ಮಹಸೇ ತಸ್ಮೈ
ಪರಸ್ಮೈನಮಃ (೪೪

ಈ ನಿರ್ವೈರಕ್ಷೇತ್ರದಲ್ಲಿ ನೆಲಸಿರುವ, ಸಾಕ್ಷಾತ್ ಬ್ರಹ್ಮ, ವಿಷ್ಣು
ಮತ್ತು ಮಹೇಶ್ವರ ರೂಪನಾದ, ಸಿಂಹ ಮತ್ತು ಆನೆಯ ಮುಖಗ
ಕಾಂತಿಯಿರುವ, ಮತ್ತು ಕುತ್ತಿಗೆಯ ಕೆಳಭಾಗವು ಸ್ಪಷ್ಟವಾಗಿ ಮಾನ
ಶರೀರವಾಗಿ ತೋರುವ, ಚರಾಚರಾತ್ಮಕನಾದ ಮತ್ತು ಲೋಕಾನು
ಗ್ರಹವನ್ನು ಮಾಡುವ ಪರಮಾತ್ಮ ಸ್ವರೂಪನಾದ ನೃಸಿಂಹನಿಗೆ ನಮ
ಸ್ಕಾರವು.

ಆಗ ಭಯಂಕರ ಭೀತಿಪ್ರದವಾದ ಹಲಾಹಲ ಶಬ್ದವು ಕೇಳಿಸಿತು
ಜನರೆಲ್ಲಾ ಭೀತಿಗೊಂಡು ಕೋಲಾಹಲವನ್ನೆಬ್ಬಿಸಿ ದಿಕ್ಕು ದಿಕ್ಕಿಗೆ ಓಡಿದರು
ಆಗೊಂದು ದಿವ್ಯವಾಣಿ ಕೇಳಿಸಿತು.

ತಾನಾಹಾಂಬರಗಾ ವಾಣೀ "ಭೀತಮಾಸ್ತು ಜಗಜ್ಜನಾಃ।
ಲೋಕರಕ್ಷಣಕಚ್ಚಿಛ್ರೀಮಾನ್ ಆವಿರಾಸ ಗಜಾನನಃ (೪೫
ಗುಪ್ತಾಽವಾಸಂ ಚಕಾರಾಸ್ಮಿನ್ನೇತಾವಂತಂ ಮನೋಹರಃ।
ಸ್ವಮುಖೇನ ನೃಸಿಂಹಸ್ಯ ಮುಖಂ ಪಶ್ಯನ್ ಜಯತ್ಯಯಂ"
(೪೬

ಇತಿ ದಿವ್ಯವಚಃ ಶ್ರುತ್ವಾ ನಮಸ್ಕುರ್ಯರ್ಗಜಂ ದ್ವಿಜಾಃ ।
ತಾವದ್ದೃಷ್ಟೋ ಗಜಃ ಸಾಕ್ಷಾತ್ ಕಂಠಾಧಃ ಪೌರುಷಂ
ವಪುಃ ( ೪೭ )
ಬಿಭ್ರದ್ದಶಾಯುಧಭುಜೋವಲ್ಲಭಾಂಕ ಶುಭಾಂಕನಃ ।
ಮಹಾಗಣಪತಿಃ ಸರ್ವವಿಘ್ನಹಾ ಸರ್ವಸಿದ್ಧಿದಃ ॥ ( ೪೮ )

"ಜಗಜ್ಜನಾ! ಜಗತ್ತಿನ ಜನರೆ! ನೀವು ಭಯಪಡಬೇಡಿರಿ. ಈ ವರೆಗೆ ಗುಪ್ತವಾಗಿ ನೆಲಸಿರುವ ಲೋಕರಕ್ಷಕನಾದ ಗಜಾನನನು ಈಗ ಆವಿರ್ಭವಿಸಿದ್ದಾನೆ. ಗಜಾನನನು ತನ್ನ ಮುಖದಿಂದ ನೃಸಿಂಹ ಮುಖವನ್ನು ನೋಡುತ್ತ ಸರ್ವೋತ್ಕರ್ಷದಿಂದಿರುವನು."

ಈ ವಾಣಿಯನ್ನು ಕೇಳಿ ಗಜಾನನನನ್ನು ಅವರೆಲ್ಲರೂ ನಮಸ್ಕರಿಸಿದರು. ಕಂಠದ ಕೆಳಗೆ ಮಾನುಷ ಶರೀರವುಳ್ಳವನೂ, ಹತ್ತು ಕೈಗಳಲ್ಲಿ ಹತ್ತು ಆಯುಧಗಳನ್ನು ಧರಿಸಿದವನೂ, ವಲ್ಲಭಾ ಎಂಬ ನಾಮಾಂಕಿತಳಾದ ಪತ್ನಿಯನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡವನೂ, ಸರ್ವಸಿದ್ಧಿಪ್ರದಾಯಕನೂ, ವಿಘ್ನಪರಿಹಾರಕನೂ ಆದ ಆ ಗಜಾನನ ದಿವ್ಯ ರೂಪವನ್ನು ಆ ಬ್ರಾಹ್ಮಣರು ಪ್ರತ್ಯಕ್ಷವಾಗಿ ನೋಡಿದರು.

ಯಸ್ಯಭಕ್ತಾಗ್ರಣೀಭಟ್ಟಃ ಸ್ವಪ್ನೇದೃಷ್ಟೋ ಮಯಾಪುರಾ ।
ಸಽದೇವೋ ದೃಶ್ಯತೇಸಾಕ್ಷಾದಿತಿ ತತ್ಪೂಜ್ಯಕೋಽಭವತ್ (೪೯)
ಅಪೂಜಯದಿಮಂ ಭಟ್ಟೋ ಗಣೇಶಂ ವಲ್ಲಭಾಯುತಂ ।
‹‹ಭಟ್ಟಸ್ಯಪೂಜಯಾ ತುಷ್ಟಸ್ತದೀಯವರದೋಽಭವತ್ (೫೦)

ಆಗ ನಾನು ಈ ಮೊದಲು ಅಹಿಚ್ಛತ್ರದಲ್ಲಿದ್ದಾಗ ಇದೇ ರೂಪವನ್ನು ಸ್ವಪ್ನದಲ್ಲಿ ನೋಡಿದ್ದೆನು. ಆ ಗಜಮುಖನೆ! ಈಗ ನಮ್ಮೆಲ್ಲರ ಮುಂದೆ ಪ್ರತ್ಯಕ್ಷ ಗೋಚರನಾಗಿರುವನು" ಎಂದು ಆ ಭಕ್ತಾಗ್ರಣಿ ಭಟ್ಟಾಚಾರ್ಯನು ಹೇಳಿ ವಲ್ಲಭಾ ಸಹಿತನಾದ ಆ ಗಜಾನನನನ್ನು ಪೂಜಿಸಿದನು. ಭಟ್ಟನ ಪೂಜೆಯಿಂದ ತೃಪ್ತನಾದ ಗಣೇಶನು ವರವನ್ನು ಅನುಗ್ರಹಿಸಿದನು.

ದೇವಮಹ್ಯಂ ವರಂದೇಹಿ ಸ್ಥಲೇಽಸ್ಮಿನ್ ಶಾಶ್ವತೋ ವಸ ।
ಭಕ್ತ್ಯಾಯತ್ನೋ ಯತೋ ದೇವಸ್ತದ್ಭಕ್ತ ಪ್ರಿಯ ಹೇತವೇ
೫೧ )

ಧರ್ಮಾರ್ದ್ಯರ್ಥಕ್ರಿಯಾ ಸಿದ್ಧಿರ್ನಿರ್ವಿಘ್ನಾಯೇನ ಜಾಯತೇ
ತೇನ ಧನ್ಯಾ ಭವಾಮೋಽಸ್ತು (ವದ)ದೇವ ಗಣೇಶ್ವರಃ ( ೧೭

ಅದಕ್ಕೆ ಭಟ್ಟಾಚಾರ್ಯನು ಈ ಪ್ರಕಾರ ವರವನ್ನು ಬೇಡಿದನ
"ನನಗೆ ವರವನ್ನು ಅನುಗ್ರಹಿಸು ಗಣೇಶ್ವರ! ಈ ಸ್ಥಲದಲ್ಲಿ ಶಾಶ್ವತವಾ
ನೀನು ವಾಸಿಸುತ್ತೇನೆಂದು ವರವನ್ನು ಕರುಣಿಸುವವನಾಗು ನೀನು ಭ
ಪರವಶನೆಂದು ಖ್ಯಾತಿ ಇದೆ. ಆದ್ದರಿಂದ ನನ್ನ ಮೇಲ್ಪಟ್ಟ ಪ್ರೀತಿಗಾ
ನೀನು ಇಲ್ಲಿಯೇ ವಾಸಮಾಡಿಕೊಂಡಿರು. ನೀನು ಇಲ್ಲಿ ನೆಲಸುವುದರಿಂ
ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಈ ನಾಲ್ಕು ಪುರುಷಾರ್ಥ
ಗಳು ಭಕ್ತರಿಗೆ ನಿರ್ವಿಘ್ನವಾಗಿ ಸಿದ್ಧಿಸುವುವು ಆದ್ದರಿಂದ ನಾವು ಧನ್ಯರಾಗ
ವೆವು. ವರವನ್ನು ಕರುಣಿಸಿದೆನೆಂದು ನುಡಿಯುವವನಾಗು".

ಭಟ್ಟಾಚಾರ್ಯನ ನಿಸ್ವಾರ್ಥಪರವಾದ ಈ ಬೇಡಿಕೆಯನ್ನು ಕೇ
ಗಣೇಶ್ವರನು ಈ ಪ್ರಕಾರ ನುಡಿದನು.

"ಜ್ಯೋತಿಷ್ಟೋಮಾದಯೋಯಜ್ಞಾ ಬ್ರಹ್ಮನ್ ವಿತ್ತವ್ಯಯಾ
ತ್ಮಿಕಾಃ
ವೈದಿಕಾಯದ್ಯಪಿ ತಥಾ ಪಶ್ಚಾತ್ಸತ್ಫಲದಾಯಿನಃ ( ೫೨
ಸದ್ಯಃ ಸಿದ್ಧಿ ಕರಃ ಸತ್ವಮಾಸ್ಪದಂ ಸ್ವರ್ಗಮೋಕ್ಷಯೋಃ ।
ಮಾರ್ಗಭೂತೋ ವಸಿಷ್ಠಾದ್ಯೈಃ ಕೃತೋಗಣಪತೋಮಖಃ ।
( ೫೩ )
ವಸಿಷ್ಠ ಸಂಹಿತಾ ಪ್ರೋಕ್ತವಿಧಿನಾ ತನ್ಮಖಂಕುರು ॥
ತನ್ಮಖಕ್ರಿಯಯಾ ಸಿದ್ಧಿರ್ನಿರ್ವಿಘ್ನೇ ಜಾಯತೇ ನೃಣಾಂ
( ೫೪ )
ಆವಿರ್ಭಾವಸ್ಥಲೇ ನಿತ್ಯಂ ವಸಾಮಿಕ್ಷೇತ್ರರೂಪತಃ
ಕುಂಡರೂಪಮಿದಂ ಕ್ಷೇತ್ರಂ ಮನ್ಮುಖಸ್ಥಲ ವಿಸಾರಿತಂ ( ೫೫ )
ಸ್ವಸ್ವಾಧಿಕಾರಾಂಸ್ತಾನ್ ದೇವಾ ಮನ್ಮಖಕ್ರಿಯಯಾ
ಯಯುಃ ।
ರಾಜಾ ಯಾಗಂ ಕರೋತ್ವಸ್ಮಿನ್ ಇತ್ಯಂತರ್ಧಿಮಗಾದ್ಗಣಃ
( ೫೬ )

"ಹೇ ಬ್ರಹ್ಮನ್! ಜ್ಯೋತಿಷ್ಟೋಮಾದಿಯಜ್ಞಯಾಗಗಳು ಹೇರಾಳ ದ್ರವ್ಯ ವ್ಯಯದಿಂದ ಸಾಧ್ಯವು. ಇವು ವೈದಿಕ ಯಜ್ಞಯಾಗಾದಿಗಳಾದರೂ, ಇನ್ನೊಂದು ಜನ್ಮದಲ್ಲಿ ಫಲವನ್ನು ಕೊಡುತ್ತವೆ. ಕ್ಷಿಪ್ರವಾಗಿ ಸಿದ್ಧಿಸುವ ಮತ್ತು ಸ್ವರ್ಗ ಮತ್ತು ಮೋಕ್ಷ ಇವೆರಡನ್ನು ದೊರಕಿಸುವ ಸನ್ಮಾರ್ಗ ಏಂದರೆ ವಸಿಷ್ಠಾದಿಗಳು ಮಾಡುತ್ತಿದ್ದ ಗಣಪತಿಹೋಮ-ಗಣಹೋಮವು. ವಸಿಷ್ಠ ಸಂಹಿತೆಯಲ್ಲಿ ಹೇಳಿರುವ ವಿಧಾನದಂತೆ ಈ ಹೋಮವನ್ನು ಮಾಡುವುದರಿಂದ ನಿರ್ವಿಘ್ನವಾಗಿ ಎಲ್ಲಾ ಸಿದ್ಧಿಗಳು ಪ್ರಾಪ್ತವಾಗುತ್ತವೆ. ಈಗ ಆವಿರ್ಭವಿಸಿರುವ ನಾನು ಈ ಸ್ಥಳದಲ್ಲಿ ಕ್ಷೇತ್ರರೂಪವಾಗಿ ಇಲ್ಲಿಯೇ ವಾಸಮಾಡುವೆನು. ಈ ಕ್ಷೇತ್ರವು ಯಜ್ಞಕುಂಡರೂಪವಾಗಿದೆ. ಈ ಯಜ್ಞಕುಂಡವೇ ಗಜಮುಖನಾದ ನನ್ನ ಬಾಯಿಯಾಗಿದೆ. ಪೂರ್ವಕಾಲ ದಲ್ಲಿ ದೇವತೆಗಳು ಈ ಪ್ರಕಾರದ ನನ್ನ ಯಜ್ಞವನ್ನು ಮಾಡಿದುದರಿಂದಲೇ ತಮ್ಮ ತಮ್ಮ ಅಧಿಕಾರಸ್ಥಾನವನ್ನು ಪಡೆದರು. ರಾಜನು ಇಲ್ಲಿ ಯಾಗ ವನ್ನು ಮಾಡಲಿ" ಎಂದು ಹೇಳಿ ಗಣಪತಿಯು ಅಂತರ್ಧಾನನಾದನು. ಆ ಮೇಲೆ ಭಟ್ಟಾಚಾರ್ಯನು, ರಾಜನು ಮತ್ತು ಬ್ರಾಹ್ಮಣರೆಲ್ಲರೂ ಸೇರಿ ಸಂತೋಷದಿಂದ ಗಣೇಶ್ವರನನ್ನು ಸ್ತುತಿಸಿದರು.

ತತೋ ಭಟ್ಟಾರಕೋ ಭಟ್ಟೋ ದ್ವಿಜಭಟ್ಟಾಜಗುರ್ಮುದಾ ।
ಸಾಧು ಸಾಧ್ವಿತಿ ತಂ ಭೂಯೋ ರಾಜಾ ಭಟ್ಟಂ ಜಗಾದ ಸಃ (೫೭)
**ಮಾಯಾಂ ಜಯ ಮಹಾಭಾಗ ಕೀರ್ತಿಂ ವರ್ಧಯ ಮೇ ಗುರೋ ।**
**ಯಾಗಕಾರ್ಯಾಣಿ ಸಿದ್ಧ್ಯಂತು ಗಣೇಶದಯಯಾ ಮಮ (೫೮)**
ತದ್ರಾಜವಚಸಾ ತೇನ ತುಷ್ಟಃ ಶಾಸ್ತ್ರವಿಧಾನತ ॥
**ಸ ಭಟ್ಟಃ ಕಾರಯಾಮಾಸಯಾಗಂ ಗಾಣೇಶ್ವರಂ ಪರಂ (೫೯)**

ಆಗ ರಾಜನು ಭಟ್ಟಾಚಾರ್ಯನನ್ನು ಕುರಿತು ಹೀಗೆಂದನು:

"ಸರಿ! ಸರಿ! ಮಹಾಭಾಗ್ಯಶಾಲಿಯೆ! ಗುರುವೆ! ನನ್ನ ಅಜ್ಞಾನವನ್ನು ನಿವಾರಿಸುವವನಾಗು. ನನ್ನ ಕೀರ್ತಿಯನ್ನು ಬೆಳಗಿಸುವವನಾಗು. ನನ್ನ ಯಾಗವು ಗಣೇಶನ ಕೃಪಾಕಟಾಕ್ಷದಿಂದ ಸಿದ್ಧಿಸಲಿ!."

ರಾಜನ ಈ ಮಾತನ್ನು ಕೇಳಿ ಸಂತುಷ್ಟನಾದ ಭಟ್ಟಾಚಾರ್ಯ
ಶಾಸ್ತ್ರದ ವಿಧಿವಿಧಾನದಂತೆ ಗಣೇಶ್ವರ ಯಜ್ಞವನ್ನು ರಾಜನಿಂದ ಮಾಡ
ದನು.

ತದ್ಯಾಗದತ್ತಾಹುತಿ ಸಿಂಧು ಪುಷ್ಟೋ
ಲಂಬೋದರೋ ಲೋಕಮುದೇ ಬಭೂವ ।
ರಾಜ್ಯೇಷು ವೃದ್ಧಿರ್ವಜಗತೀ ಮಹರ್ಧಿಃ!
ಕಾರ್ಯೇಷು ಸಿದ್ಧಿಃ ಸಕಲೇಷು ಬುದ್ಧಿಃ ( ೬೦

ವಷ್ಟಿಃ ಪುಷ್ಪಮಯೀ ದಿವಃ ಕ್ಷಿತಿಗತಾ ಭೂಮಂಡಲಂ
ಮಂಡಿತಂ
ತೀರ್ಥೈಃ ಪುಣ್ಯತಮ್ಯೈಃ ಸ್ಥಲೈರ್ದ್ವಿಜಗಣೈಃ ಸಶ್ರೌತಸಿದ್ಧಾಗ್ನಿಭಿ
( ೬೧

ತಸ್ಯಾತಿಸ್ಥಲ ಮುತ್ತಮಂ ಮಧುವನಂ ವೇಲಾಪನಂ
ಕೂಟಜಂ
ಶಾಲಿಗ್ರಾಮಮಿದಂತ್ವಥಾ ಗಜಪುರಂ ಶ್ರೇಷ್ಠಂ
ಸಮಾವಿರ್ಬಭೌಃ ( ೬೨

ಆ ಯಾಗದಲ್ಲಿ ಧಾರಾಸಾಗರವಾಗಿ ಕೊಟ್ಟ ಆಜ್ಯಾಹುತಿಗಳಿಂ
ಪುಷ್ಟಿಗೊಂಡ ಗಣೇಶನು "ಲಂಬೋದರ" (ಲಂಬ-ಜೋಲಾಡುವ, ಉದರ
ಹೊಟ್ಟೆಯುಳ್ಳವನು) ಎಂಬ ಹೆಸರನ್ನು ಪಡೆದು ಲೋಕಕ್ಕೆ ಕಲ್ಯಾಣವನ
ಮಾಡಿದನು. ಲೋಕಾದಿತ್ಯನ ರಾಜ್ಯದಲ್ಲಿ ಅಭಿವೃದ್ಧಿಯೂ, ಜನರ
ಸಮೃದ್ಧಿಯೂ ಸಕಲ ಕಾರ್ಯಗಳ ಸಿದ್ಧಿಯೂ., ಪ್ರಜೆಗಳಲ್ಲೆಲ್ಲಾ ಸುಬ
ದ್ಧಿಯೂ, ಗಣೇಶ್ವರನ ಅನುಗ್ರಹದಿಂದ ಉಂಟಾದವು. ಆಗ ಭೂಮಿಯ
ಮೇಲೆ ಆಕಾಶದಿಂದ ಪುಷ್ಪವೃಷ್ಟಿಯು ಸುರಿಯಿತು. ಭೂಲೋಕವ
ಮಂಡಿತವಾಯಿತು. ಪುಣ್ಯತೀರ್ಥಗಳೂ, ಶ್ರೌತಸ್ಮಾರ್ತಸಿದ್ಧವಾ
ಯಜ್ಞಾಗ್ನಿಗಳೂ, ಬ್ರಾಹ್ಮಣರು ಇರುವ ಈ ಉತ್ತಮ ಸ್ಥಳವು ಮಧುವ
ವೆಂದೂ, ವೇಲಾಪುರವೆಂದೂ, ಕೂಟಜವೆಂದೂ, ಸಾಲಿಗ್ರಾಮವೆಂದೂ
ಗಜಪುರವೆಂದೂ ಪ್ರಸಿದ್ಧಗೊಂಡು ಪ್ರಜ್ವಲಿಸಿತು.

ಗಜಾನನನು ನೆರೆದ ಬ್ರಾಹ್ಮಣರನ್ನು "ಜಗಜ್ಜನಾ" ಎಂದು ಸಂಬೋಧಿಸಿದುದರಿಂದ ಈ ಕೂಟಗ್ರಾಮವು 'ಜಗತ್ತು' ಎಂದು ವಿಖ್ಯಾತಗೊಳ್ಳಲು ಕಾರಣವಾಗಿರಬೇಕು.

ನೃಸಿಂಹತಾಪಿನ್ಯುಪನಿಷತ್ (ಪೂರ್ವ ಮತ್ತು ಉತ್ತರ) ಇವೆರಡು ನೃಸಿಂಹ ಉಪಾಸನೆಗೆ ಪ್ರಾಧಾನ್ಯ ಆಧಾರಶ್ರುತಿಗಳಾಗಿವೆ. ಗುರು ನೃಸಿಂಹಧ್ಯಾನಮಂತ್ರ ಮತ್ತು ವಿಧಾನವು ಈ ಎರಡು ಉಪನಿಷತ್ತುಗಳಲ್ಲಿ ವಿವರಿಸಿವೆ. ಅವ್ಯಕ್ತೋಪನಿಷತ್ತಿನಲ್ಲಿಯೂ ಗುರುನೃಸಿಂಹಧ್ಯಾನಮಂತ್ರದ ವ್ಯಾಖ್ಯಾನವಿದೆ. ಉಗ್ರಂ ಎಂಬುದು ಗುರುಧ್ಯಾನಮಂತ್ರದ ಆದಿಪದವು ಆದ್ದರಿಂದ "ಉಗ್ರನೃಸಿಂಹ" ಎಂದು ಹೇಳಲು ಕಾರಣವಾಗಿದೆ.

ಆದಿಯಲ್ಲಿ ಗುರುನೃಸಿಂಹ ಮೂರ್ತಿಯು ಪೂರ್ವಮುಖವಾಗಿ ಪ್ರತಿಷ್ಠೆಯಾಗಿತ್ತು. ಒಮ್ಮೆ ದೇವರ ಉಜ್ವಲ ಜ್ವಾಲೆಯಿಂದ ಪೂರ್ವದ ಊರೆಲ್ಲಾ ಧ್ವಂಸವಾಯಿತು. ತನ್ನ ಸರ್ವಸ್ವವು ನಾಶವಾಯಿತೆಂದು ಒಬ್ಬ ಬ್ರಾಹ್ಮಣನು ಬಂದು ಹಾರೆಯಿಂದ ವಿಗ್ರಹವನ್ನು ಕಡಿದನೆಂದು ಪ್ರತೀತಿ ಇದೆ. ಆಗ ತುಂಡಾದ ವಿಗ್ರಹದ ಒಂದು ಚಕ್ಕೆಯು ಈಗಲೂ ಗರ್ಭಗುಡಿಯಲ್ಲಿದೆ. ಆ ಮೇಲೆ ವಿಗ್ರಹವು ಪಶ್ಚಿಮಾಭಿಮುಖವಾಗಿ ಪ್ರತಿಷ್ಠೆಮಾಡಲ್ಪಟ್ಟಿತು. ಭಗವಂತನ ಜ್ವಾಲೆಯನ್ನು ತಡೆಯುವುದಕ್ಕಾಗಿ ಪಶ್ಚಿಮದಲ್ಲಿ ದೇವರಿಗೆ ಎದುರಾಗಿ ಆಂಜನೇಯನನ್ನು ಸ್ಥಾಪಿಸಿದರು ಎಂದು ಹೇಳುತ್ತಾರೆ.

ಅವ್ಯಕ್ತೋಪನಿಷತ್ತಿನಲ್ಲಿ ನೃಸಿಂಹದರ್ಶನವನ್ನು ಈ ಪ್ರಕಾರ ವರ್ಣಿಸಿದ್ದಾರೆ. "ಶೇಷಫಣಾಚ್ಛಾದಿತಮೌಲಿಂ ಮೃಗಮುಖಂ ನರವಪುಷಂ ಶಶಿಸೂರ್ಯಹವ್ಯವಾಹನಾತ್ಮಕ ನಯನತ್ರಯಮ್"

ದಿವ್ಯಮಂಗಲ ನೃಸಿಂಹ ವಿಗ್ರಹದ ಶಿರವು ಶೇಷನ ಹೆಡೆಯಿಂದ ಆಚ್ಛಾದಿತವಾಗಿದೆ. ಸಿಂಹಮುಖ ಮತ್ತು ಮನುಷ್ಯ ಶರೀರ ಮತ್ತು ಚಂದ್ರ ಸೂರ್ಯ ಮತ್ತು ಅಗ್ನಿಗಳೆಂಬ ಮೂರು ಕಣ್ಣುಗಳಿವೆ. ಈ ಪ್ರಕಾರದ ದಿವ್ಯಮಂಗಲ ನೃಸಿಂಹವಿಗ್ರಹಮೂರ್ತಿಯು ಶ್ರೀ ಸಾಲಿಗ್ರಾಮಕ್ಷೇತ್ರದಲ್ಲಿ ಮಾತ್ರ ಇರುವುದಾಗಿದೆ.

ನೃಸಿಂಹಪೂರ್ವತಾಪನೀಯ ಉಪನಿಷತ್ತಿನಲ್ಲಿ "ನೃಸಿಂಹಗಾಯತ್ರಿ ಯು "ಓಂ ನೃಸಿಂಹಾಯ ವಿದ್ಮಹೆ" ಎಂದು ಆರಂಭವಾಗಿದೆ. "ಶ್ರೀ ಲಕ್ಷ್ಮೀನೃಸಿಂಹಾಯ ವಿದ್ಮಹೆ" ಎಂದಿರುವುದಿಲ್ಲ. ಅಲ್ಲದೆ ಶ್ರೀಲಕ್ಷ್ಮಿಯು ಶ್ರೀ ಸಾಲಿಗ್ರಾಮಕ್ಷೇತ್ರದಲ್ಲಿ ಪ್ರತಿಷ್ಠಿತವಾಗಿರುವುದಿಲ್ಲ. ಆದ್ದರಿಂದ ಶ್ರೀ ಲಕ್ಷ್ಮೀನೃಸಿಂಹ ಪ್ರೀತ್ಯರ್ಥಂ" ಎಂದು ಅರ್ಚಕರಾದಿಗಳು ಮಾಡುವ ಸಂಕಲ್ಪವಿಧಾನವು ನಮ್ಮ ಧರ್ಮಾಚಾರಕ್ಕೆ ಸಮ್ಮತವಾಗಿರುವುದಿಲ್ಲ.

ಸಾಲಿಗ್ರಾಮ ಮಾಹಾತ್ಮ್ಯೆಯಲ್ಲಿ ನಾರದಾದಿ ಮುನಿಗಳು ಕೇಳಿದ ದಿವ್ಯ ವಾಣಿಯು "ಯೋಗಾನಂದ ನೃಸಿಂಹಾಖ್ಯಂ" ಎಂದು ಈ ದಿವ್ಯ ಮೂರ್ತಿಯನ್ನು ವರ್ಣಿಸಿದೆ. "ಲಕ್ಷ್ಮೀನೃಸಿಂಹ" ಎಂದು ಸಂಬೋಧಿಸಿರು ವುದಿಲ್ಲ. ಆದ್ದರಿಂದ ಕೂಟಮತಸ್ಥರು ನಡೆಯಿಸುವ ಗುರುಸೇವಾ ಕಾರ್ಯದಲ್ಲಿ ಶ್ರೀ ಯೋಗಾನಂದನೃಸಿಂಹ ಪ್ರೀತ್ಯರ್ಥಂ ಎಂದು ಸಂಕಲ್ಪ ಮಾಡಬೇಕಾಗಿರುವುದು ನಮ್ಮ ಧರ್ಮಾಚಾರವಾಗಿದೆ.

ಶ್ರೀ ಸಾಲಿಗ್ರಾಮಕ್ಷೇತ್ರದ ಪ್ರತಿಷ್ಠೆಯ ವಿಚಾರ ಈ ಪ್ರಕಾರ ತಿಳಿದು ಬಂದಿದೆ. ಮಹಾಗಣಪತಿ ಯಂತ್ರವನ್ನು ಅದಿಯಲ್ಲಿ ಸ್ಥಾಪನೆಮಾಡಿ, ಅದರ ಮೇಲೆ ನೃಸಿಂಹ ಮೂರ್ತಿಯು ಕಮಲ ಪತ್ರದ ಮೇಲೆ ಪ್ರತಿಷ್ಠೆ ಯಾಗಿದೆ. ಈ ವಿಗ್ರಹದ ಕೂಲವೇ ಕಮಲಪತ್ರದ ನಾಳವಾಗಿದೆ. ಶ್ರೀ ದೇವರ ಯಾವತ್ತು ಕಾರ್ಯಗಳಲ್ಲಿ "ಮಹಾಗಣಪತಿ ನೃಸಿಂಹ ಪ್ರೀತ್ಯ ರ್ಥಂ" ಎಂದು ಸಂಕಲ್ಪಮಾಡುತ್ತಾರೆ.

ಸಾವಿರ ತೆಂಗಿನಕಾಯಿ ಗಣಹೋಮವೇ ಶ್ರೀ ಸಾಲಗ್ರಾಮ ದೇವ ಸ್ಥಾನದಲ್ಲಿ ನಡೆಯುವ ಪ್ರಾಮುಖ್ಯ ಸೇವೆಯಾಗಿರುತ್ತದೆ. ಕಾಲಕಾಲಕ್ಕೆ ಸರಿಯಾಗಿ ಮಳೆ ಬಾರದ ಸಮಯ ಕೂಟ ಮತಸ್ಥರು ದೇವಸ್ಥಾನದಲ್ಲಿ ಸೇರಿ, ಮೂಡಗಣಪತಿ, ಸೀಯಾಳಾಭಿಷೇಕ, ಮನೆಅಕ್ಕಿ ಸಮಾರಾಧನೆ ಮಾಡಿ ಶ್ರೀಗುರು ನೃಸಿಂಹನನ್ನು ಪ್ರಾರ್ಥಿಸುವ ಪದ್ಧತಿ ಇದೆ. ಅನಾ ವೃಷ್ಟಿ ಮೊದಲಾದ ವಿಪತ್ತುಗಳು ಈ ಪ್ರಕಾರ ಸೇವೆಸಲ್ಲಿಸುವುದರಿಂದ ನಿವಾರಣೆಯಾಗಿರುವುದು ಎಲ್ಲರಿಗೂ ವೇದ್ಯವಾಗಿದೆ. ಆದ್ದರಿಂದ ಶ್ರೀಗುರು

ುರಸಿಂಹ ದೇವಸ್ಥಾನದಲ್ಲಿ ಪದ್ಧತಿಪ್ರಕಾರ ನಡೆದುಬರುವ ಮೂಡಗಣಪತಿ, ುನೆಅಕ್ಕಿ ಸಮಾರಾಧನೆ ಮೊದಲಾದವುಗಳನ್ನು ನೇರವೇರಿಸುವುದನ್ನು ಕೂಟ ಮಹಾ ಜಗತ್ತಿನ ಧ್ಯೇಯವಾಗಿ ಜ್ಞಾಪಕಪತ್ರದಲ್ಲಿ ಸೇರಿಸಿದೆ. (ಜ್ಞಾಪಕಪತ್ರ ಧ್ಯೇಯ ಮತ್ತು ಉದ್ದೇಶಗಳನ್ನು ನೋಡಿರಿ.)

## ಗುರುಸೇವೆಗಳ ವಿವರ

ಧನುರ್ಮಾಸದಲ್ಲಿ ಪ್ರತಿನಿತ್ಯ ಬೇರೆ ಬೇರೆಯವರಿಂದ ದೇವಸ್ಥಾನದಲ್ಲಿ ಬ್ರಾಹ್ಮಣ ಸಂತರ್ಪಣೆ ನಡೆಯುತ್ತದೆ. ದೇವಸ್ಥಾನದಲ್ಲಿ ನಡೆಸಬಹುದಾದ ಇತರ ಸೇವೆಗಳ ವಿವರ ಕೆಳಗೆ ಕೊಟ್ಟಿದೆ.

| | | |
|---|---|---|
| 1. | ಶ್ರೀ ಮನ್ಮಹಾ ಗಣಹೋಮ | ರೂ. 500.00 |
| 2. | ರಂಗ ಪೂಜಾ (ಹಿರಿದು) | 100.00 |
| 3. | ರಂಗ ಪೂಜಾ (ಕಿರಿದು) | 60.00 |
| 4. | ಮೂಡ ಗಣಪತಿ (ಕಾಣಿಕೆ ಕೂಡಾ) | 35.00 |
| 5. | ನಂದಾದೀಪ (1 ತಿಂಗಳಿಗೆ) | 30.00 |
| 6. | ಸಂಹಿತಾಭಿಷೇಕ | 17.50 |
| 7. | ಶನಿವಾರ ಫಲಾರ್ಪಣೆ (ತೆಂಗಿನಕಾಯಿ) 1 ವರ್ಷಕ್ಕೆ | 12.00 |
| 8. | ತುಲಾಭಾರ (ಭಾರಹೆಡೆ ವಿನಹಾ) | 14.00 |
| 9. | ಹರಿವಾಣ ನೇವೇದ್ಯ-ಪಂಚಾಮೃತ | 5.00 |
| 10. | ಶ್ರೀ ನೃಸಿಂಹ ಸಹಸ್ರನಾಮ | 3.00 |
| 11. | ಹಾಲು ಪರಮಾಹ್ನ ನೇವೇದ್ಯ | 1.25 |
| 12. | ಕರ್ಪೂರ ಆರತಿ | 0.25 |

## ಗುರುಕಾಣಿಕೆ ವಿವರ

ಕೂಟ ಮಹಾಜಗತ್ತಿನ 9ನೆ ನಿಬಂಧನೆಯು ಈ ಪ್ರಕಾರ ಇದೆ

(ಅ) (i) ಜಗತ್ತಿನ ಪ್ರತಿ ಮನೆಯವರೂ ತಮ್ಮಲ್ಲಿ ನಡೆಯುವ ವಿವಾಹದ ಬಗ್ಗೆ ವಧೂವರರ ಪ್ರತಿ ಕಡೆಯಿಂದ ರೂ. 1.00; ಉಪ ನಯನದ ಬಗ್ಗೆ ರೂ. 0.50 ಈ ರೀತಿ ಕಾಣಿಕೆಗೆ ಕಮ್ಮಿಯಾಗದಂತೆ ಗುರು ದೇವಸ್ಥಾನಕ್ಕೆ ತಪ್ಪದೆ ಒಪ್ಪಿಸತಕ್ಕದ್ದು.

(ii) ಕೂಟ ಹದಿನಾಲ್ಕು ಗ್ರಾಮಗಳಲ್ಲಿರುವವರು ಕ
ಕಾಣಿಕೆಯನ್ನು ತಮ್ಮಲ್ಲಿನ ಶುಭಕಾರ್ಯ ನಡೆದ ಮೂರು ತಿಂಗಳೊಳಗ
ಗುರುದೇವಸ್ಥಾನಕ್ಕೆ ತೆತ್ತು ಅಥವಾ ಟಪ್ಪಾಲು ದ್ವಾರಾ ಕಳುಹಿಸಿ
ದೇವಸ್ಥಾನದಲ್ಲಿರುವ ಮಹಾಸಭೆಯ ಆಫೀಸಿನ ರಶೀದಿ ಪಡೆಯತಕ್ಕದ್ದು

(iii) ಜಗತ್ತಿನ ಅಂಗ ಸಂಸ್ಥೆಗಳಿರುವ ಇತರ ಕಡೆಗಳಲ್ಲಿ ಕಾಣಿಕೆಯನ್ನು ಅಂಗಸಂಸ್ಥೆಯ ಕಾರ್ಯದರ್ಶಿಗೆ ತೆತ್ತು ಅಥವಾ ಟಪ್ಪಾಲು ಮೂಲಕ ರವಾನಿಸಿ ಅವರ ರಶೀದಿ ಪಡೆಯತಕ್ಕದ್ದು.

(iv) ಅಂಗ ಸಂಸ್ಥೆಗಳಿಲ್ಲದ ಇತರ ಕಡೆಗಳಲ್ಲಿ ಕಾಣಿಕೆಯನ್ನು ಟಪ್ಪಾಲು ದ್ವಾರಾ ಜಗತ್ತಿನ ಆಫೀಸಿಗೆ ಕಳುಹಿಸಿ ಕ್ರಮವಾದ ರಶೀದಿ ಪಡೆಯತಕ್ಕದ್ದು.

---

# ಒ ಪ್ಪೋಲೆ

21, 23, 25, 27, 29, 31 ಈ ಪುಟಗಳ ಶಿರೋನಾಮವು ಪತಿತವರ್ಗದವರು ಎಂದು ತಿದ್ದುವುದು.

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| iii | ii | ಸ್ವಾಮಿಯರು | ಸ್ವಾಮಿಯವರು |
| iv | 2 | ಗ್ರಂಥ ಪಾಠಾನಂತರ | ಗ್ರಂಥ ಪಾತಾನಂತರ |
| | 16 | ಜಿಲೆಯ | ಜಿಲ್ಲೆಯ |
| 3 | 4 | ಹೆಸರಾಂತನು | ಹೆಸರು ಪಡೆದನು |
| 10 | 1 | ಪ್ರಾಜ್ಞಾಂ | ಪ್ರಾಚ್ಯಾಂ |
| 12 | 14 | ತ್ಯಜಿ ಸಿಹೋದ | ತ್ಯಜಿಸಿಹೋದ |
| 13 | 5 | ತಮ್ಮ | ತನ್ನ |
| 18 | 14 | ವಿಪ್ರಶ್ರೇಷ್ಠನೆ | "ವಿಪ್ರಶ್ರೇಷ್ಠನೆ. |
| 28 | 17 | ಬಾಹ್ಮಣನು | ಬ್ರಾಹ್ಮಣನು |
| 30 | 8 | ಮೆಟ್ಟಿ | ಮೆಟ್ಟ |
| 46 | 7 | ಭಿನ್ನಾಭಿಪ್ರಾಯಕ್ಕೆ | ಭಿನ್ನಾಭಿಪ್ರಾಯ |
| 52 | 21 | ಅಶ್ವಸ್ಥ | ಅಶ್ವತ್ಥ |
| 62 | 6 | ಮೇಲ್ಪಟ್ಟ | ಮೇಲಿಟ್ಟ |

## ಚಿಹ್ನೆಗಳ ವಿವರಣೆ

ಸ=ಸಹ್ಯಾದ್ರಿ ಉತ್ತರಖಂಡ

ಸಾ. ಮಾ.=ಕ್ಷೇ=ಶ್ರೀ ಸಾಲಿಗ್ರಾಮಕ್ಷೇತ್ರ ಮಾಹಾತ್ಮ್ಯೆ

ಲೋ=ಲೋಕಾಧಿತ್ಯ ಪದ್ಧತಿ